# ಅಶ್ವತ್ಥಾಮನ್



ಕರ್ಣಾಟಕ ಸಂಘ

ಸೆಂಟ್ರಲ್ ಕಾಲೇಜು, ಬೆಂಗಳೂರು

೧೯೪೩

# ಅಶ್ವತ್ಥಾಮನ್

"ಶ್ರೀ"

ಕರ್ಣಾಟಕ ಸಂಘ
ಸೆಂಟ್ರಲ್ ಕಾಲೇಜು, ಬೆಂಗಳೂರು
೧೯೪೨

# ನಾಟಕದ ಸಾರಾಂಶ

೧

ರಾತ್ರಿ ಪಾಂಡವರ ಪಾಳೆಯದಲ್ಲಿ ಕೊಲೆಮಾಡಿದವನು ಯಾರೆಂದು ಕಂಡುಹಿಡಿಯಲು ಹೆಜ್ಜೆಗುರುತಿನಿಂದ ಕೃಷ್ಣನು ಅಶ್ವತ್ಥಾಮನ ಗೂಡಾರದ ಬಳಿಗೆ ಬರುವನು. ಅಲ್ಲಿ ರುದ್ರನು ಅವನಿಗೆ—ಅಶ್ವತ್ಥಾಮನು ಕೌರವನ ದುರ್ಮರಣದಿಂದ ಕ್ರುದ್ಧನಾಗಿ, ಪಾಂಡವರನ್ನೆಲ್ಲಾ ನಾಶಮಾಡುವಂತೆ ವರವನ್ನು ಕೇಳಿ, ತಾನು ಕೊಡದಿರಲು ತನ್ನನ್ನು ಧಿಕ್ಕರಿಸಿ, ಪಾಂಡವರ ಪಾಳೆಯವನ್ನು ಅರ್ಧರಾತ್ರಿಯಲ್ಲಿ ಹೊಕ್ಕು, ತನ್ನ ಮಾಯೆಯಿಂದ ಉನ್ಮತ್ತನಾಗಿ ಪಶುಗಳು ಹೆಂಗಸರು ಮಕ್ಕಳು ಮುಂತಾದವರನ್ನು ಕೊಂದು, ಸೆರೆಗಳೆಂದು ಕೆಲವು ಪಶುಗಳನ್ನೂ, ಕೃಷ್ಣನೆಂದು ಒಂದು ಕುರಿಯನ್ನೂ ಗೂಡಾರಕ್ಕೆ ಹಿಡಿದುಕೊಂಡು ಬಂದು ಹಿಂಸಿಸುತ್ತಿರುವ ಸಂಗತಿಯನ್ನು ತಿಳಿಸುವನು. ಕೃಷ್ಣನು ಬೇಡಬೇಡವೆಂದರೂ ರುದ್ರನು ಅಶ್ವತ್ಥಾಮನನ್ನು ಹೊರಕ್ಕೆ ಬರಮಾಡುವನು. ಅಶ್ವತ್ಥಾಮನು ತಾನು ಭೀಮಾರ್ಜುನರನ್ನು ಕೊಂದುದನ್ನು ಹೊಗಳಿಕೊಂಡು ಯುದ್ಧಕ್ಕೆಲ್ಲಾ ಕಾರಣನಾದ ತಂತ್ರಿಯಾದ ಕೃಷ್ಣನಿಗೆ ಮಾಡುವ ಚಿತ್ರಹಿಂಸೆ ಇನ್ನೂ ಇದೆ ಎಂದು ಹೇಳಿ ಒಳಗೆ ಹೋಗುವನು. ಕೃಷ್ಣನು ಅಶ್ವತ್ಥಾಮನ ಗತಿಯನ್ನು ಕಂಡು ಮರುಗುವನು. ರುದ್ರನು—ಎಷ್ಟೇ ಪೌರುಷವಿರಲಿ, ಐಶ್ವರ್ಯವಿರಲಿ, ಮನುಷ್ಯಮಾತ್ರನಾದವನು ಅಹಂಕಾರದಿಂದ ಮದಿಸಿ, ದೇವತೆಗಳನ್ನು ಧಿಕ್ಕರಿಸಿದರೆ, ದೇವತೆಗಳು ಅಂತಹವನನ್ನು ಮುರಿಯುವರು ಎಂದು ತಿಳಿಸುವನು.

೨

ಮೇಳದವರು ಘೋರಕೃತ್ಯವನ್ನು ಮಾಡಿದವನು ಅಶ್ವತ್ಥಾಮನೆಂದು ಪಾಂಡವರ ಸೇನೆ ಕೂಗುವುದನ್ನು ಕೇಳಿ, ನಿಜಾಂಶವನ್ನು ತಿಳಿಯುವುದಕ್ಕೆ ಅಶ್ವತ್ಥಾಮನ ಬಳಿಗೆ ಬರುವರು. ನಿಜವಾಗಿದ್ದಲ್ಲಿ ಏನೋ ದೈವದ ಮೋಸವಿರಬೇಕೇ ಹೊರತು ಬುದ್ಧಿಪೂರ್ವಕವಾಗಿ ಅಶ್ವತ್ಥಾಮನು ಈ ಕೆಟ್ಟಕೆಲಸವನ್ನು ಮಾಡಿರಲಾರನೆಂದು ಹೇಳಿಕೊಳ್ಳುವರು. ಭಾರ್ಗವಿ ಬಂದು ಮೇಳದವರಿಗೆ ಇದೆಲ್ಲಾ ನಿಜವೆಂದು ತಿಳಿಸುವಳು; ಮತ್ತು ಅಶ್ವತ್ಥಾಮನ ಭ್ರಮೆ ಹೋಗಿ ಬುದ್ಧಿ ತಿರುಗಿ, ಬಹು ಪಶ್ಚಾತ್ತಾಪಪಟ್ಟು, ಏನೋ ಕೆಟ್ಟ ಯೋಚನೆಯಲ್ಲಿರುವನೆಂದೂ, ಕೆಳೆಯರಾದ ಮೇಳದವರು ಅವನನ್ನು ಸಂತೈಸಬೇಕೆಂದೂ ಪ್ರಾರ್ಥಿಸುವಳು.

Funding: Tattva Heritage Foundation,Kolkata. Digitization: eGangotri.



೩

ಅಶ್ವತ್ಥಾಮನು ತಾನು ಕೊಂದ ಪಶುಗಳ ನಡುವೆ ಸಂಕಟಪಡುತ್ತ, ಇಂಥ ದುಷ್ಕೃತ್ಯವನ್ನು ಮಾಡಿದ ನನಗೆ ಮರಣವೇ ಸರಿ, ನಾನಿನ್ನು ಮಾನದಿಂದ ಬದುಕುವುದು ಅಸಾಧ್ಯ ಎಂದು ಬಗೆದು, ತಾನು ಕೌರವನ ಹಗೆಯನ್ನು ತೀರಿಸಿ ಸ್ವಾಮಿಭಕ್ತಿಯನ್ನು ತೋರಿಸುವುದಕ್ಕೆ ಹೊರಟರೆ ದೈವವು ಹೀಗೆ ಮಾಡಿಸಿತೆಂತಲೂ, ತನ್ನ ಅಪಕೀರ್ತಿಯನ್ನು ಸತ್ತು ನೀಗಬೇಕೆಂತಲೂ ಭಾರ್ಗವಿಗೂ ಮೇಳದವರಿಗೂ ಹೇಳುವನು. ಅವರು ಎಷ್ಟು ಸಮಾಧಾನ ಹೇಳಿದರೂ ಒಪ್ಪುವುದಿಲ್ಲ. ತನ್ನನ್ನು ಕಡೆಯಲ್ಲಿ ಕೈಬಿಟ್ಟ ರುದ್ರನಲ್ಲಿ ತನಗೆ ಭಕ್ತಿಯ ಹಂಗು ಹರಿದುಹೋಯಿತೆಂದು ತಿಳಿಸಿ, ಸುಖವನ್ನೇ ಅರಿಯದ ತನ್ನ ಬಾಳನ್ನೂ, ತನ್ನ ತಾಯ್ನಾಡಾದ ಕನ್ನಡವನ್ನೂ, ನೆಲಸಿದ ನಾಡಾದ ಕುರುಕ್ಷೇತ್ರವನ್ನೂ ಸ್ಮರಿಸಿಕೊಂಡು ವ್ಯಥೆಪಟ್ಟು, ತನ್ನ ಮಗನಾದ ರುದ್ರಶಕ್ತಿಯನ್ನು ಕರೆಸಿ, ಆಶೀರ್ವಾದಮಾಡಿ, ಬೇಟೆಗೆ ಹೋಗಿರುವ ಏಕಲವ್ಯನು ಎಲ್ಲರಿಗೂ ರಕ್ಷಕನಾಗುವನೆಂದು ಹೇಳಿ ಒಳಕ್ಕೆ ಹೋಗುವನು.

೪

ಮೇಳದವರು ಬನವಾಸಿಯ ಸುಖವನ್ನೂ, ಇಲ್ಲಿ ತಮ್ಮ ಪಾಡನ್ನೂ, ಭಾರ್ಗವಿಯ ದುಃಖವನ್ನೂ, ಅಶ್ವತ್ಥಾಮನ ದುಷ್ಪರಿಣಾಮವನ್ನೂ ನೆನಸಿಕೊಂಡು ಶೋಕಿಸುವರು.

೫

ಇವರಿಂದ ತಪ್ಪಿಸಿಕೊಂಡು ಹೋಗುವುದಕ್ಕಾಗಿ, ವಕ್ರೋಕ್ತಿಯಿಂದ ಅಶ್ವತ್ಥಾಮನು ತಾನು ಭಾರ್ಗವಿಯ ಗೋಳಿಗೆ ಮರುಗಿದನೆಂದೂ, ಬಲಿಷ್ಠರಾದ ದೇವತೆಗಳ ಮೇಲೆ ಎದಿರು ಬೀಳುವುದು ಮೂರ್ಖತನವೆಂದು ತನಗೆ ಜ್ಞಾನೋದಯವಾಯಿತೆಂದೂ, ತೀರ್ಥಗಳಲ್ಲಿ ಸ್ನಾನಮಾಡಿ ತನ್ನ ಕಳಂಕವನ್ನು ತೊಳೆದು ರುದ್ರನ ಕೋಪವನ್ನು ನಿವಾರಿಸುವನೆಂದೂ, ಇಷ್ಟರಲ್ಲೇ ತನ್ನ ಮಿತ್ರರು ತನ್ನ ಸಂಕಟವೆಲ್ಲಾ ಪರಿಹಾರವಾಗಿ ಬಿಡುಗಡೆಯಾಯಿತೆಂಬ ಸುದ್ದಿಯನ್ನು ಕೇಳುವರೆಂದೂ ಹೇಳಿ ಹೊರಟುಹೋಗುವನು.

೬

ಮೇಳದವರು ನಂಬಿ ಅಶ್ವತ್ಥಾಮನು ರುದ್ರನ ಕಡೆ ತಿರುಗಿದನೆಂದೂ, ಬದುಕಿಕೊಂಡನೆಂದೂ ಆನಂದಪಟ್ಟು, ಶಿವನನ್ನು ಪ್ರಾರ್ಥಿಸಿ, ನಾಟ್ಯವಾಡುವರು. ಅಷ್ಟರಲ್ಲಿ ಒಬ್ಬ ದೂತನು ಓಡಿಬಂದು ಏಕಲವ್ಯನು ಬೇಟೆಗೆ ಹೋಗಿದ್ದವನು ಹಿಂದಿರುಗಿದನೆಂದೂ, ಒಡನೆ

ಪಾಂಡವರ ಸೇನೆಯೆಲ್ಲವೂ ಅಶ್ವತ್ಥಾಮನ ಆಪ್ತಮಿತ್ರನೆಂದು ಅವನ ಮೇಲೆ ಬಿದ್ದಿತೆಂದೂ, ಆದರೆ ಕೃಷ್ಣನು ಎಲ್ಲರನ್ನೂ ಸಮಾಧಾನಪಡಿಸಿ ಏಕಲವ್ಯನಿಗೆ—ಈ ಒಂದು ದಿವಸ ಅಶ್ವತ್ಥಾಮನ ಮೇಲೆ ರುದ್ರನ ಆಗ್ರಹವಿರುವುದು; ಅವನನ್ನು ಹೊರಗೆ ಬಿಡದೆ ಒಳಗೆ ತಡೆದಿರಿ, ಶಾಂತಿಮಾಡಿ ರುದ್ರನ ಪ್ರಸಾದವನ್ನು ಸಂಪಾದಿಸಿ ಅವನನ್ನು ಉಳಿಸಿಕೊಳ್ಳೋಣ ಎಂದು ಹೇಳಿದನೆಂದೂ ತಿಳಿಸುವನು. ಅಶ್ವತ್ಥಾಮನು ಆಗಲೇ ಹೊರಟುಹೋದನಲ್ಲಾ ಎಂದು ಆತಂಕಪಟ್ಟು ಮೇಳದವರೂ ಭಾರ್ಗವಿಯೂ ಅವನನ್ನು ಅರಸಿಕೊಂಡು ಹೋಗುವರು.

೭

ಅಶ್ವತ್ಥಾಮನು ಪಾಂಡವರನ್ನು ಶಪಿಸಿ ಖಡ್ಗದ ಮೇಲೆ ಬಿದ್ದು ಸಾಯುವನು. ಭಾರ್ಗವಿಯೂ ಮೇಳದವರೂ ಕಂಡು ದುಃಖಿಸುವರು. ಪಾಂಡವರೂ ಕೃಷ್ಣನೂ ಈ ಭಾಗದಲ್ಲಿ ಗರ್ವಪಡುವುದಕ್ಕೆ ಕಾರಣವಿಲ್ಲ; ಅಶ್ವತ್ಥಾಮನನ್ನು ಅವರು ಜಯಿಸಲಿಲ್ಲ; ದೈವವು ಮುರಿಯಿತು ಎಂದು ಭಾರ್ಗವಿ ಹೇಳುವಳು. ಏಕಲವ್ಯನೂ ಬಂದು ಸೇರಿ, ಅಶ್ವತ್ಥಾಮನ ಗುಣಪ್ರಶಂಸೆ ಮಾಡಿ, ತಾನು ಯಾವ ಮುಖವನ್ನಿಟ್ಟುಕೊಂಡು ತನ್ನೂರಿಗೆ ಹೋಗುವುದು ಎಂದು ಖೇದಪಟ್ಟು ಪ್ರೇತ ಸತ್ಕಾರಕ್ಕೆ ತೊಡಗುವನು. ಆಗ ಭೀಮನು, ದ್ರೌಪದಿಯ ಮಕ್ಕಳನ್ನು ಅಶ್ವತ್ಥಾಮನು ರಾತ್ರಿ ಕೊಂದನೆಂದು, ರೋಷಾವೇಶದಿಂದ ಬಂದು ತನ್ನ ಶತ್ರು ಸತ್ತಿರುವುದನ್ನು ಕಂಡು ಶವವನ್ನು ನಾಯಿನರಿಗಳಿಗೆ ಎಳಿಸುತ್ತೇನೆ, ಉತ್ತರಕ್ರಿಯೆ ಆಗಕೂಡದು ಎಂದು ತಡೆಯುವನು. ಏಕಲವ್ಯನಿಗೂ ಭೀಮನಿಗೂ ಮಾತು ನಡೆದು, ಯುದ್ಧವಾಗುವುದು.

೮

ಮೇಳದವರು ಯುದ್ಧವೆಂಬುದನ್ನು ಮೊಟ್ಟಮೊದಲು ಯಾರು ಮಾಡಿದರೋ ಎಂದು ಶಪಿಸುತ್ತ, ಶಾಂತಿಯ ಸುಖಗಳನ್ನು ನೆನೆಯುತ್ತ, ಭಾರತ ಯುದ್ಧಕ್ಕೆ ಮೂಲಳಾದ ದ್ರೌಪದಿ ಯಾವ ಗಳಿಗೆ ಹುಟ್ಟಿದಳೋ ಎಂದು ಅವಳನ್ನು ಜರೆಯುತ್ತ, ಭೀಮ ಏಕಲವ್ಯರಿಗೆ ಕ್ಷಮೆಯನ್ನು ತಾಳಿ ಎಂದು ಹೇಳುವರು.

೯

ಅಷ್ಟರಲ್ಲಿ ಕೃಷ್ಣನು ಬಂದು ಭೀಮನಿಗೆ ಸಮಾಧಾನ ಹೇಳುವನು. ವೀರರು ವೀರರಿಗೆ —ಅದರಲ್ಲಿಯೂ ಸತ್ತಮೇಲೆ—ಅಪಮಾನಪಡಿಸುವುದು ಕ್ಷತ್ರಿಯ ಧರ್ಮವಲ್ಲವೆಂತಲೂ, ಉತ್ತರಕ್ರಿಯೆಗಳಿಗೆ ಅಡ್ಡಿಯಾಗಿ ಬರುವುದು ಮನುಷ್ಯಧರ್ಮಕ್ಕೇ ಅಲ್ಲ, ದೈವಶಾಸನಕ್ಕೂ

೬

ವಿರುದ್ಧವೆಂತಲೂ, ಹೆಂಗಸಿನ ದುಃಖಕ್ಕಾಗಿ ಮತ್ಸರವನ್ನು ಬೆಳಸಬಾರದೆಂತಲೂ, ಅಶ್ವತ್ಥಾಮನು ಮಹಾವೀರನು, ಪೂಜ್ಯನು ಎಂತಲೂ ಹೇಳುವನು. ತನ್ನ ದೇವರು ರುದ್ರನೇ ಕೈಬಿಟ್ಟವನಲ್ಲಿ ನಿನಗೇಕೆ ಇಷ್ಟು ವಿಶ್ವಾಸವೆಂದು ಭೀಮನು ಆಕ್ಷೇಪಿಸಲು,—ರುದ್ರ ಹೃದಯವನ್ನು ನಾವೇನು ಬಲ್ಲೆವು, ಕಲ್ಮಷವನ್ನು ಕಳೆದು ಪರಿಶುದ್ಧಾತ್ಮವನ್ನು ಸೆಳೆದುಕೊಂಡನೆಂದು ನಾನು ತಿಳಿಯುತ್ತೇನೆ ಎಂದು ಹೇಳುವನು. ನಿನ್ನಿಷ್ಟದಂತೆ ನಡೆಸು ; ನನಗೆ ಅವನಲ್ಲಿ ವಿಶ್ವಾಸ ಹುಟ್ಟದು ಎಂದು ಹೇಳಿ ಭೀಮನು ಹೊರಟುಹೋಗುವನು. ಕೃಷ್ಣನು ಅಶ್ವತ್ಥಾಮನ ಮಗನನ್ನು ಹರಸುವನು.

೧೦

ಉತ್ತರಕ್ರಿಯೆಗಾಗಿ ದೇಹವನ್ನು ಸಾಗಿಸುವರು. ತಮ್ಮ ದೇಶಕ್ಕೆ ಹಿಂದಿರುಗಿ, ರುದ್ರನಲ್ಲಿ ಹೋರಿ ರುದ್ರನಲ್ಲಿ ಸೇರಿದ ಅಶ್ವತ್ಥಾಮನಿಗೆ ಅಲ್ಲಿ ಒಂದು ದೇವಸ್ಥಾನವನ್ನು ಕಟ್ಟಿ, ಜಾತ್ರೆಯನ್ನು ಏರ್ಪಡಿಸುವುದಾಗಿ ಏಕಲವ್ಯನೂ ಮೇಳದವರೂ ಹರಸಿಕೊಳ್ಳುವರು.

ಭರತವಾಕ್ಯ

# ಅಶ್ವತ್ಥಾಮನ್

## ಎಂಬ ರುದ್ರ ನಾಟಕಂ

[ಗ್ರೀಕ್ ಮಹಾಕವಿ ಸಾಫೊಕ್ಲೀಸಿನ "ಏಜಾಕ್ಸ್" ಎಂಬ ರುದ್ರ ನಾಟಕವನ್ನು ಆಶ್ರಯಿಸಿ, ಮಹಾಭಾರತದ ಸೌಪ್ತಿಕಪರ್ವದ ಕಥೆಯನ್ನು ಅದರೊಡನೆ ಹೊಂದಿಸಿಕೊಂಡು, ಈ ನಾಟಕವನ್ನು ರಚಿಸಿರುತ್ತದೆ. ಇದರಲ್ಲಿ ದ್ರೋಣನ ತಾಯಿ ಭಾರ್ಗವಿ ಪರಶುರಾಮನ ತಂಗಿಯೆಂದೂ, ದ್ರೋಣಾಶ್ವತ್ಥಾಮರು ಕನ್ನಡನಾಡಿನ ಬನವಾಸಿ ಪ್ರಾಂತದಿಂದ ಕೌರವನಾಸ್ಥಾನಕ್ಕೆ ಹೋಗಿ ಸೇರಿದರೆಂದೂ, ಇದೇ ಪ್ರಾಂತಕ್ಕೆ ಸೇರಿದ ಏಕಲವ್ಯನು ತನ್ನ ಗುರುಗಳ ಬೆಂಬಲವಾಗಿ ತನ್ನ ಬೇಡರ ಸೈನ್ಯವನ್ನು ತೆಗೆದುಕೊಂಡು ಹೋಗಿ ಭಾರತ ಯುದ್ಧದಲ್ಲಿ ಕಾದಿದನೆಂದೂ ಕಲ್ಪಿಸಿಕೊಂಡಿದೆ. ಈ ಬೇಡರೇ ಈ ನಾಟಕದಲ್ಲಿ ಮೇಳದವರು.

—ಶ್ರೀ]

## ಪಾತ್ರಂಗಳ್

ರುದ್ರನ್

ಕೃಷ್ಣನ್

ಅಶ್ವತ್ಥಾಮನ್

ಭಾರ್ಗವಿ

ರುದ್ರಶಕ್ತಿ

ದೂತನ್

ಏಕಲವ್ಯನ್

ಭೀಮನ್

ಕನ್ನಡದ ಬೇಡರ ಮೇಳಂ

# ಅಶ್ವತ್ಥಾಮನ್

[ಕುರುಕ್ಷೇತ್ರದೊಳ್ ಅಶ್ವತ್ಥಾಮನ ಬೀಡ ಮುಂದೆ
ರುದ್ರನ್, ಪಜ್ಜೆಯಱಿಸುತೆ ಕೃಷ್ಣನ್]

ರುದ್ರನ್

ವಾಸುದೇವ!

ಕೃಷ್ಣನ್

ಭಗವನ್!

ರುದ್ರನ್

ಏಗಳುಂ ನೀನ್, ನೋಟಿಪ್ಪಿನ್,
ಅಱಿಗುಲಿಗಳನ್ ಮುಱಿವ ನೋಂಪಿಯನ್ ನೋಂತಿರ್ಪೆ.
ಈಗಳ್ ಅಶ್ವತ್ಥಾಮನ್ ಇರ್ಪ ಕಡೆವೀಡೆಯ್ದಿ,
ಪೊಸಪಜ್ಜೆಗಳನ್ ಅಳೆದು, ಇಣಿಕಿಣಿಕಿ, ಒಳಗಿರ್ಪನ್
ಇಲ್ಲವೆಂದಾರಯ್ದುದೇನ್ ಮಾಟಿಪ್ಪೆ? ಕಂಪುವಿಡಿ
ದಿಂತು ಬರ್ಕುಮಂ ಬಿಡದೆ ಬೇಂಟೆನಾಯ್! ಎನಗಱಿವು
ಕಾರ್ಯಮನ್. ನೀನ್ ಪ್ರಿಯನ್ ನಮಗೆ.

ಕೃಷ್ಣನ್

ಎನ್ನೊಡೆಯ,
ಅಮರರೊಳ್ ನನಗೆ ಪರಮಪ್ರೇಮಿ, ಓ ರುದ್ರ,
ನಿನ್ನಾತ್ಮಮ್ ಎನ್ನುಸಿರ್; ಜಯಭೇರಿ ನಿನ್ನ ದನಿ.
ನಿನ್ನೊಳ್ ಆಲೋಚಿಸದೆ ನಾನ್ ತೊಡಗಿದುದುಮ್ ಉಂಟೆ?
ಆಲಿಪುದು.—ಈ ಇರುಳ್ ನಡೆದುದೊಂದದ್ಭುತಂ.
ಪಟ್ಟ ಪಡೆ ಪಟ್ಟಂತೆ ಪೊಯ್ದತ್ತು. ಪಾಯ್ದತ್ತು
ಭೂತಮೆಂಬರ್ ಕೆಲರ್; ಮತ್ಸರದ ಕೌರವನ
ಪ್ರೇತಮೆಂಬರ್ ಕೆಲರ್. ಪಲಪಲವು ಕಳವಳಂ.
ಆರುಮ್ ಇಂತೆಂದಱಿಯರ್. ಇದಱ ತಳಮನ್ ಪಿಡಿಯೆ

ಅಶ್ವತ್ಥಾಮನ್

ಬೆದಕುತಿರೆ, ಕಾಪಿನಾಳ್ ಒರ್ವನ್ ಎನ್ನನ್ ಕೂಗಿ,
ನಡುನಡುಗುತಮಮ! ಭೈರವರೂಪಂ!—ಆ ದೆಸೆಯೆ!
ರಕ್ತಾಭಿಷೇಕಂ! ಅಶ್ವತ್ಥಾಮನನ್ ಪೋಲ್ಗುಂ,
ಅದೊ ಪರಿಗುಂ ಎಂದನ್. ಒಡನೆ ಬೆಂಬತ್ತಿದೆನ್.
ಒರ್ಮೆ ಕಾಣ್ಬುದು ಪಜ್ಜೆ, ಒರ್ಮೆ ಕಾಣದು. ಪೆರ್ಮ,
ನಿನ್ನ ದರ್ಶನಮ್ ಆಯ್ತು; ಜಯಮ್ ಆಯ್ತು ಇನ್ನೆನಗೆ.
ನೇರಮೋ ಈ ಬೇಂಟೆ?

ರುದ್ರನ್

ನೇರಂ. ಆತನದೆ
ಈ ಕೆಲಸಮ್; ಒಳಗಿರ್ಪನ್.

ಕೃಷ್ಣನ್

ಏಕೆ ಕಯ್ಯಿಟ್ಟನೋ
ಇಂತಪ್ಪ ಘೋರದೊಳ್!

ರುದ್ರನ್

ಕ್ರೋಧಾತ್ಮಪರವಶನ್!
ತನ್ನನಾಳ್ದನ ಕೊಲೆಯು ಮಾನಭಂಗಕೆ ಮುಳಿದು
ಪಾಂಡವಧ್ವಂಸಮನ್ ಮಾಡಿ ಮೆಚ್ಚಿಪೆನೆಂದು
ಸಾಱಿದನ್, ಕೈಮುಟ್ಟಿ, ಪ್ರಿಯತಮಸ್ವಾಮಿಯೊಳ್.

ಕೃಷ್ಣನ್

ಒಱಗಿರ್ದ ವೀರರನ್ ಕೊಲ್ವುದೇನ್? ಅದಱಿತೊಳಂ
ಪಶುಗಳನ್? ಪೆಂಡಿರನ್? ಮಕ್ಕಳನ್?

ರುದ್ರನ್

ಇಱಿದಿಱಿದು
ನಿಮ್ಮೆಲ್ಲರನ್ ಕೊಂದೆನೆಂಬುದೇ ಅವನೆಣಿಕೆ.

ಕೃಷ್ಣನ್

ಆ ರೌದ್ರಖಡ್ಗದಿನ್ ಅದೆಂತು ನಾವ್ ಬರ್ದುಱ್ಕಿದೆವು?
ಆರ್ ತಡೆದರ್ ಆ ಕೊಲೆಯ ಕಯ್ಯನ್?

ರುದ್ರನ್

ಕೇಳ್, ಪೇೞ್ವೆನ್.
ನೇಸಱ್ತೊಡನಾ ಕೌರವನ್ ಮುೞುಗೆ, ನಿಡುಪೊೞ್ತು ಪಕ್ಕದೊಳ್ ಕುಳ್ತು,
ದುಃಖದೊೞ್ಕಿನ್ ಸುಂಗಿ, ಕಟ್ಟೊಲ್ಮೆಯಾಳ್ದಂಗೆ ಭಕ್ತಿಯಿನ್ ಕಡೆಗೆ
ಕಣ್ಮುಚ್ಚಿ, ಅಡಿಗಡಿಗೆ ಪಲ್ಗಡಿದು, ತನ್ನ ಬೀಡನ್ ಪೊಕ್ಕು, ಕೆಳರ್ದು,
ಬಿಲ್ಲನ್ ಒರ್ಕಡೆ ಬಿಸುಟು, ಒಱೆಯಿಂದಮ್ ಇರ್ಬಾಯ ಖಡ್ಗಮನ್ ಪಿರಿದು,
ನಿಟ್ಟೋಟದಿನ್ ಪರಿದು, ನಿಶೆಯೊಳಗೆ ನಿಮ್ಮ ಪಾಳೆಯದೊಳಗೆ ನೆಗೆದನ್.
ಕಾಣಿಸಿದೆನ್ ಆಗಳ್ ಆನ್. ಪ್ರಿಯವೀರ, ಡಾೞಿಯೇನ್? ವರಮಾವುದೀವೆನ್?
ಪಾಂಡವರ ಲೋಕಕೆನ್ನಿನ್ ಪ್ರಳಯಮೆಂದನ್.—ಕೆಲರ್ ಉೞಿದು, ಎಂದೆನ್.
ನೋಡುತಿರು, ನೋಡುತಿರು, ಎಲೆ ರುದ್ರ, ದೂರದೊಳ್ ನೋಡುತಿರು, ವೀರ್ಯಂ
ಮಾನುಷಮ್ ಅದೆಂತಿರ್ಕುಮೆಂಬುದನ್!—ಮದಿಸಿ ತಾನ್ ನಕ್ಕನ್; ಆನ್ ನಕ್ಕೆನ್.
ಮಾಯಮನ್ ಬೀಸಿದೆನ್. ಮರುಳ್ಗೊಂಡಸನ್ ಮಾಡಿ, ಕಣ್ಮುಸುಕಿ, ತಿರಿಪಿ
ನಿಮ್ಮ ನಡುಬೀಡಿನಿನ್, ಪೊಱವೀಡ ಮಂದಿ ಇರ್ದೆಡೆಗಳೊಳೆ ಬಿಟ್ಟೆನ್.
ಆಹ, ಏನ್ ಆರ್ಭಟಂ! ಆಹ, ಏನ್ ಚೀಱಾಟಂ! ಏನ್ ಕೊಲ್ವ ಗರ್ವಂ!
ಮೇಲ್ಬಿೞ್ದು ತುಱುಗಳನ್ ತಱಿದನ್. ಎೞ್ಬಿಟ್ಟ ಪೆಣ್ಗಳನ್ ಪೋೞ್ದನ್.
ದಾದಿಬೞಿ ಪಸುಳೆಯನ್ ಬಾಳ್ಮೊನೆಗೆ ಚುರ್ಚಿದನ್, ಬಿರ್ಚಿದನ್, ಕೊಯ್ದನ್.
ಗೂಡಾರಮನ್ ಕಿೞ್ತು, ಕಣ್ಪೊಸೆವ ಕಲಿಗಳನ್ ಮೂದಲಿಸಿ ಪೊಯ್ದನ್.
ನಾನ್ ಅವನ ಬೞಿ ಇರ್ದು, ಮರುಳ್ಗೆ ಧೂಪಂದೋಱುತಾ ಮನಃಕ್ಷೋಭಂ
ತೆರೆಮಸಗೆ ಊದಿದೆನ್—ಆಹ, ಧೃಷ್ಟದ್ಯುಮ್ನ, ಗುರುವನ್ ಇಂತಲ್ತೆ
ಕೊಱೆದು ಪುಣ್ಯಂಗೊಂಡೆ! ಎಂದೊಂದು ಕುದುರೆಯನ್ ಕೊರಲೌಂಕಿ ಕೊಱೆದನ್.
ಆನೆಯೊಂದನ್ ತೞ್ಪಿ, ಭೀಮಸೇನನೆ ಗೆತ್ತು, ರಾಕ್ಷಸಾ, ದೈತ್ಯಾ,
ಕೌರವೇಂದ್ರನ, ಬಿೞ್ದ ಚಕ್ರವರ್ತಿಯ ಮುಡಿಯನ್ ಒದೆದ ಕಾಲ್ ಎಲ್ಲಿ?
ಎಲ್ಲಿ ತೋಱೆಂದದಱ ಕಾಲ್ಮುಱಿದು, ಬಲ್ವೆಣನನ್ ಒದೆದೊದೆದು, ಬಿಸುಟನ್.
ಕಡೆಗೆಲ್ಲರನ್ ಕೊಂದೆನೆಂದೆಣಿಸಿ, ಕೌಂಕುೞಿಯೊಳ್ ಕುಱಿಯೊಂದನ್ ಇಱುಕಿ
ಬಾ, ಕೃಷ್ಣ, ಯುದ್ಧಮನ್ ಪೊತ್ತಿಸಿದ ಮಾಯಾವಿ, ಫಲಮನ್ ಉಣ್, ಬಾರ,
ನೀನ್ ಪಿರಿಯ ಬಿರ್ದಿನನ್, ಎನುತೆ ಬೀಡಿಂಗುಯ್ದು ಹಿಂಸಿಸುತ್ತಿರ್ಪನ್.
ಸುತ್ತಲುಂ ಬೀರರೆಂದಟ್ಟಿತಂದುವು ಪಶುಗಳ್ ಇಱಿದು ಕೆಡೆದಿರ್ಕುಂ.

ನೋಡು, ಆ ನೋಟಮನ್. ಬೆದಱದಿರು. ತೋಱುವೆನ್ ಪೆರ್ಚಿದಾ ಪುರ್ಚನ್—
ಓಹೊ, ಅಶ್ವತ್ಥಾಮ, ಸೆಱೆಗಳನ್ ಪೀಡಿಸುವುದಂತಿರ್ಕೆ, ಬಾರ!
ಬಾರ, ಬೀರರ ಬೀರ, ದೈವಮನ್ ಲೆಕ್ಕಿಸದ ರುದ್ರಾವತಾರ!

ಕೃಷ್ಣನ್

ಏನ್ ಮಾಱಿಪ್ಪೆ, ಓ ರುದ್ರ, ಕರೆಯದಿರ್, ಕರೆಯದಿರ್.

ರುದ್ರನ್

ಏನಯ್ಯ, ಪೇಡಿತನಂ, ಅಂಜದಿರ್.

ಕೃಷ್ಣನ್

ನಿನ್ನಾಣೆ, ಬೇಡ, ಬೇಡೊಳಗಿರ್ಕೆ.

ರುದ್ರನ್

ಏನ್ ಭಯಂ? ಮರ್ತ್ಯನ್ ಅವನ್ ಈಗಳುಂ.

ಕೃಷ್ಣನ್

ಮರ್ತ್ಯನೇ—ಆದೊಡೆನಗರಿಯ ಪಗೆ.

ರುದ್ರನ್

ನಗೆ ಇನಿದು—ಪಗೆಗಳನ್ ನಗುವ ನಗೆ.

ಕೃಷ್ಣನ್

ಬೇಡ ಎನಗಾ ನಲಿವು. ಒಳಗಿರ್ಕೆ.

ರುದ್ರನ್

ಅಱಿವು ಮರುಳಾದಂಗೆ ಬೆದಱಿಪ್ಪೆಯಾ?

ಕೃಷ್ಣನ್

ಅಱಿವು ತಿಳಿದೆಯ್ದುರ್ಕೆ, ಬೆದಱೆನ್.

ರುದ್ರನ್

ನೀನ್ ಇರ್ಪುದನ್ ಬಂದು ಕಾಣನ್.

ಕೃಷ್ಣನ್

ಆದೆಂತಕ್ಕುಂ? ಅವನ ಕಣ್ ಕುರುಡೆ?

ರುದ್ರನ್

ಕಟ್ಟಿಲಿಪೆನ್ ಆನ್ ಕಾಣ್ಬ ಕಣ್ಣನ್.

ಕೃಷ್ಣನ್

ಬಗೆಯೆ ದೇವತೆ ಆವುದಾಗದೋ!

ರುದ್ರನ್

ಅಲುಗದೆಯೆ ನೋಡುತಿರು, ಅರುಗಾಗಿ.

ಕೃಷ್ಣನ್

ನಿನ್ನಾಜ್ಞೆ.—ಆನ್ ಇರೆನೆ ದೂರದೊಳ್!

ರುದ್ರನ್

ಓಹೊ, ಅಶ್ವತ್ಥಾಮ! ಮತ್ತೊರ್ಮೆ ಬರವೇಟ್ಟಿನ್!
ಇಂದಿದೇನ್ ಇನಿತೊಂದು ಮಿತ್ರನೊಳ್ ಅನಾದರಂ?

[ಅಶ್ವತ್ಥಾಮನ್ ಚಮ್ಮಟಗೆವಿಡಿದು]

ಅಶ್ವತ್ಥಾಮನ್

ಎನ್ನ ದೇವತೆ, ಗೆಲವು! ಗೆಲವು ಗೆಲವೋ ರುದ್ರ!
ಸಯ್ಪು ನೀನ್ ಬಂದುದು, ಕೃಪಾಕರಾ! ಈ ಜಯಕೆ
ಸೇವಿಪೆನ್ ನಿನ್ನ ಕೊರಲೊಳ್ ಪೊನ್ನ ತಲೆಗಳನ್.

ರುದ್ರನ್

ನಲ್ನುಡಿ. ಅದಂತಿರ್ಕೆ. ಊಡಿದೆಯ—ಪೇಟಿನಗೆ—
ಪಾಂಡವರ ದಟಿದ ಬಿಸುನೆತ್ತರಿನ್ ಖಡ್ಗಮನ್?

ಅಶ್ವತ್ಥಾಮನ್

ಎನ್ನದಾ ಅಗ್ಗಳಿಕೆ, ಏಕಿಲ್ಲಮೆಂದಪೆನ್!

ರುದ್ರನ್

ಬಗೆ ತಣಿಯ ಪೊಯ್ದೆಯೋ ಭೀಮಪಾರ್ಥರ್ಕಳನ್?

ಅಶ್ವತ್ಥಾಮನ್

ಇನ್ನವರ್ ಕೆಣಕರ್ ಅಶ್ವತ್ಥಾಮನ್ ಎಂಬೊಸನ್.

ರುದ್ರನ್

ಇರ್ವರುಂ ಸತ್ತರ್!

ಅಶ್ವತ್ಥಾಮನ್

ಸತ್ತರ್. ಇನ್ ಪುಟ್ಟರ್. ತಣಿ, ಕೌರವ!

ರುದ್ರನ್

ಸಲ್ಲದು. ಆ ಪಾಂಡವರ್ ಪ್ರಾಣಮೆಂದಿರ್ದನೇ
ಅವನ ಗತಿ ಏನಾಯ್ತು? ಕಯ್‌ನುಣ್ಚಿಕೊಂಡನೋ?

ಅಶ್ವತ್ಥಾಮನ್

ಏನಾದನ್ ಆ ಗುಳ್ಳೆನರಿ ಎಂದು ಕೇಳ್ದಿಯಾ?

ರುದ್ರನ್

ಅಪ್ಪುದಾ ಕೃಷ್ಣನ್, ನಿಮಗೆಲ್ಲಮ್ ಇಱಿವ ಮುಳ್.

ಅಶ್ವತ್ಥಾಮನ್

ಆಹ, ಒಳಗಿರ್ಪನ್! ಸವಿಯ ಸೆಱೆ, ಸವಿಯ ಸೆಱೆ ಎನಗೆ.
ಅವನನ್ ಈಗಳೆ ಕೊಲ್ಲೆನ್, ಎನ್ನ ದೊರೆ!

ರುದ್ರನ್

ಏನ್ ಮಾಡಿಪ್ಪೆ?
ಮೊದಲ್ ಅವನಿನ್ ಏನಾಗವೇಟ್ಕುಮೋ? ಏನ್ ಫಲಮೊ?

ಅಶ್ವತ್ಥಾಮನ್

ಎನ್ನ ಗೂಡಾರದಾ ಕಂಬಕ್ಕೆ ಬಿಗಿದು—

ರುದ್ರನ್

ಬಿಗಿದು—

ಅಶ್ವತ್ಥಾಮನ್

ಈ ಚಮ್ಮಟಿಗೆ ಸುಲಿದು, ಬೆನ್ ಪಸುರ್ಗಟ್ಟೆ—

ರುದ್ರನ್

ಪಾಪ, ರಾಸಕ್ರೀಡೆಯಾಡುವೊನ್ ಪೆಣ್ಡಿರೊಳ್!

ಅಶ್ವತ್ಥಾಮನ್

ಆಡಿಪೆನ್, ಆಡಿಪೆನ್. ನೀರ್ ಕೇಳೆ, ಪೊಯ್‌ಪೊಯ್ದು, ಪಾಡಿಪೆನ್.

ರುದ್ರನ್

ಬೇಡ, ಹಿಂಸಿಸಬೇಡ, ಆ ಬಡವು ಗೋಪನನ್.

ಅಶ್ವತ್ಥಾಮನ್

ಮತ್ತೇನೆ ಕೇಳ್, ರುದ್ರ, ಕೊಟ್ಟಪೆನ್. ಇದೊಂದಿಲ್ಲಂ!

ಇಂತೆ ಸಾಯಲ್‌ವೇೞ್ಕುಂ ಆ ತಂತ್ರಿ.

ರುದ್ರನ್

ಆಯ್ತಾಯ್ತು:
ನಿನ್ನಿಚ್ಛೆಗೆನ್ನಿಚ್ಛೆಯೇನ್? ಸಲಿ, ಪೋಯ್ದು ನಲಿ.
ನಿನ್ನ ಕಯ್ ತಡೆವರ್ ಆರ್ ಇರ್ಪರ್? ಪೋಗು, ಸಲಿ.

ಅಶ್ವತ್ಥಾಮನ್

ನಲಿವೆನ್, ಇದೊ, ಪೋಪೆನ್—ಒಂದನ್ ಎರೆವೆನ್, ರುದ್ರ,
ಇಂದಿನವೊಲ್ ಏಗಳುಂ ಕಯ್ಬಿಡದೆ ಕಾಪಾಡು. [ಪೋಪನ್

ರುದ್ರನ್

ಏನ್ ಪಿರಿದು, ನೋಡಿದೆಯ, ದೈವಬಲಂ, ಎಲೆ ಕೃಷ್ಣ,
ಆರಿರ್ದರ್ ಈತನಿನ್ ಜ್ಞಾನಿಯುಂ ಶೂರನುಂ?
ಬಲ್ಲಯ್ ಆರಾನುಮನ್?

ಕೃಷ್ಣನ್

ನಾನ್ ಕಾಣೆನ್ ಆರುಮನ್.
ಅವನ ಗತಿಯನ್ ಕಂಡು, ಎನ್ನ ಪಗೆಯಾದೊಡಂ,
ವಿಧಿವಶದೆ ಕಾಲ್‌ತೊಡರ್ದು ಬಿೞ್ದಂಗೆ ಮಱುಗುವೆನ್.
ಇಂದವನ್, ನಾಳೆ ನಾನ್. ಏನ್ ಪಾಡೊ ಆಳ ಬಾೞ್!
ಬೀಸುವ ಬಯಲ್‌ಗಾಳಿ, ಪರಿದಡಂಗುವ ನೆೞಲ್!

ರುದ್ರನ್

ಇಂತಪ್ಪ ನೋಟಂಗಳನ್ ನೋಡಿ, ದೈವದೊಳ್
ಸೊರ್ಕ್ಕುನುಡಿ ನುಡಿಯದಿರ್; ಕೊರ್ಬದಿರ್, ಸಿಸಗೊರ್ಮೆ
ಸಿರಿಯೆನಿತು, ಬಲಮೆನಿತು, ಕಯ್ಯೆನಿತು ನಡೆದೊಡಂ!
ಒಂದು ಪಗಲ್ ಎತ್ತುವುದು, ಒಂದು ಪಗಲ್ ಉರುಳಿಪುದು
ಮಾನುಷಮನ್ ಎಲ್ಲಮನ್. ಮಿತಿಯಱಿದು ನೆಗೞ್ವರ್ಗೆ
ದೇವರ್ಕಳ್ ಒಸೆದಪರ್—ಮುಳಿದಪರ್ ಮಿಕ್ಕರನ್. [ಪೋಪರ್

## ಮೇಳಂ

೧

ದ್ರೋಣಪುತ್ರ, ರುದ್ರಮಿತ್ರ,
ನಿನ್ನ ಪೆಸರ ಪೞಿ ಇದೇನ್?
ಕೃಷ್ಣನ್ ಆಡೆ, ಕೂಡೆ, ಪಡೆಯೆ
ಕೂಗುತಿರ್ಪ ಕೂಗಿದೇನ್?
ಇರುಳೊಳ್ ಎೞ್ದು, ಮೇಲೆ ಬಿೞ್ದು,
ಮೆಯ್ಮಱೆತರನ್ ಇಱಿದೆಯಾ?
ಪಶುವಿದೆನ್ನದೆ, ಪಸುಳೆಯೆನ್ನದೆ,
ಬಾಳ್ ಮಿಸುಗಿಸಿ ತಱಿದೆಯಾ?
ಕೆಟ್ಟ ಬಾಯ್ಗಳ್ ಉಲಿವರ್ ಇಂತು,
ನಿನ್ನ ನಾಣ್ಗೆ ಸಲಿವರೇ!
ತೆಂಕನಾಡ ಶೌರ್ಯಮಿದೆಂ
ದೆಮ್ಮ ಪೆಸರ್ ಸುಲಿವರೇ!
ದ್ರೋಣಪುತ್ರ, ರುದ್ರಮಿತ್ರ,
ನಿನಗೆ ಶುಭಮೆ ನಲಿವೆನ್ ಆನ್.
ಬೆದಱುಗಣ್ಣ ಬೆಳುವನಂತೆ
ನಿನ್ನ ೞಿಲ್ಗ ೞಿಲ್ವೆನಾನ್.
ಪಿರಿಯನಾಗು, ಕಿಱಿಯವೆಲ್ಲ
ಕಱುಬಿ ಕೆಸಱಿನ್ ಇಡುಗುವೋ!
ಮೇಲ್ಮೆಯುವನೊಳ್ ಎಚ್ಚ ಕೋಲೊ
ತಪ್ಪದೆ ಗುಱಿ ನಡುಗುವೋ!
ಏೞ ಗುರುವೆ, ಸೂರ್ಯನೊಡನೆ,
ನಮ್ಮ ಬಾೞ ಸೂರ್ಯನೇ,
ಕವಿದ ಪೞಿಯ ಪಿರಿಯ ಮರ್ಬ
ಸುರಿದು ಚೆದಱಿ ಸಾರ್ಯನೇ!

## ೨

### ಅರೆಮೇಳಂ ೧

ಕೃಷ್ಣನೇನ್ ಪುಸಿವನೇ, ನಾನ್ ಪೇೞಲಾಱೆನ್!
ನಂಬದಿರಲಾಱೆನೇ, ನಂಬಲ್ಕಮಾಱೆನ್!
ಏನ್ ಭಯಂಕರವಮಾಯ್ತೊ, ಇರುಳೊಳಗೆ ಕಾಣೆನ್!
ಎನ್ನೊಡೆಯನನ್ ಮುಳಿದು ರುದ್ರನೇ ಪೊಯ್ದನೋ
ಗೆಲ್ಲಕ್ಕೆ ಜಾತ್ರೆಯನ್ ಬಂದುದಿಲ್ಲೆಂದು?
ತನಗೆ ಮುಡಿಪನ್ ಕಟ್ಟಿ ತಂದುದಿಲ್ಲೆಂದು?
ಮೊದಲ ಬೇಂಟೆಯೆ ತನಗೆ ಸಂದುದಿಲ್ಲೆಂದು
ಕಣ್ ಕಟ್ಟಿ ಶಬರಶಂಕರನ್ ಎತ್ತಲ್ ಉಯ್ದನೋ?
ಮೊನೆಯೊಳ್ ನೆರಂ ಬಂದು, ಧಿಕ್ಕರಿಸೆ, ಬಯ್ದನೋ
ಅಱಿವು ಮರುಳಾಗೆಂದು ಬೀರನ್, ಕುಮಾರನ್?
ಏನ್ ಬುದ್ಧಿಮೋಸಮೋ, ಇರುಳೊಳಗೆ ಕಾಣೆನ್!
ಶಿವನ್ ಉಗ್ರನಾದುದೇನ್, ಕಾಣೆನ್!

### ಅರೆಮೇಳಂ ೨

ಇಲ್ಲದಿರೆ, ಎಂತಕ್ಕುಮ್ ಈ ಪೊಲ್ಲಗೆಯ್ಮೆ?
ಎಲ್ಲರುಂ ಕೂಗುವೀ ನಾಣ್ಗೆಟ್ಟ ಗೆಯ್ಮೆ?
ಎನ್ನೊಡೆಯ, ತಿಳಿದು ತಿಳಿದುಂ ತಪ್ಪಿ ಪೋಗಯ್!
ಎನ್ನೊಡೆಯ, ತಱಿಸಂದು ತುಱುಗಳನ್ ಕೊಲ್ವೆಯಾ?
ಮೂಗುಸಿರ್ಗಳನ್ ತಱುಬಿ, ಮಂದೆಗಳನ್ ಇಡಿದು,
ಅರೆಬಿರಿದ ಪೊಸ ಎಸೞ್ ಮಕ್ಕಳನ್ ಬಡಿದು,
ಬಾಯ್ಬಿಟ್ಟು ಬೇಡುವಾ ಪೆಣ್ಗಳನ್ ಕಡಿದು,
ಕಲಿಗಳೊಳೆ ಕಲಿ ಎಂದು ನೀನ್ ಇಂತು ನಿಲ್ವೆಯಾ?
ಮೇಣ್ ಒರ್ಮೆ, ದೇವತೆಗಳೇ ಕೞಿಪೆ, ಗೆಲ್ವೆಯಾ
ಕಳ್ಳನ್ ಉಣಿಸುವ ಮೋಹನದ ಕಣ್ಣ ಪೆಣ್ಣನ್?
ಇಲ್ಲದಿರೆ, ನೀನ್ ಇರುಳ್ ನಿಱಿದಪ್ಪಿ ಪೋಗಯ್:
ಘೋರಕರ್ಮಮನ್ ಎಸಗೆ ಪೋಗಯ್.

ಕಿ

ಏಱಿ, ಏಱಿ, ಓ ಅಶ್ವತ್ಥಾಮಾ,
ಮುನ್ನೀರೆಲರಾ ನಾಡಿನ ಪ್ರೇಮಾ,
ಬೀದಿವರಿವುದೇ ಬೀಡಿನೊಳ್ ಎತ್ತಂ,
ತನ್ನಿಚ್ಛೆಯೊಳೇ ತಾನ್ ಬಗೆದತ್ತಂ,
ಕೃಷ್ಣನ ನುಡಿ; ಅದು ಪುಸಿಯೆನಿಸೇಱಾ.
ಎಮಗೊಂದಭಯದ ಸುಡಿಯನ್ ಪೇಱಾ.
ರುದ್ರಭಕ್ತನೇ, ಆರ್ಯಪೂಜ್ಯನೇ,
ಮೊಗದೋಱದಿದೇನ್, ಬಾರಾ, ಬಾರಾ.
ಪಱಿಯ ಬೆಂಕೆಯೊಳ್ ಬೆಂದೆನ್, ನೊಂದೆನ್,
ಅಱಿಲ್ಗೆ ತಣ್ಪನ್ ತಾರಾ, ತಾರಾ.
ತಪ್ಪಿರೆ, ಶಿವನಾ ಕ್ಷಮೆಯನ್ ಸೇರಾ.
ಒಪ್ಪಿರೆ, ಶಿವನೇ ಪೊರೆವನ್, ಪಾರಾ.

[ಬೀಡಿನ್ ಭಾರ್ಗವಿ]

ಭಾರ್ಗವಿ

ನೀಳ್ದೋಳ್ ವಿಂಧ್ಯದ ತೆಂಕಣ ನಾಡರ್,
ಅಶ್ವತ್ಥಾಮನ ಕೆಳೆಯರ್, ಬೇಡರ್,
ಕ್ರೂರಮ್ ಎಮ್ಮ ವಿಧಿ ಈ ಕುರುಧರೆಯೊಳ್!
ಆತ್ಮಂ ಪುದಿದಿರೆ ತಮದೊಳ್, ಜೋಲ್ದನ್
ಎಂತಪ್ಪೆಡರ್ಗಮ್ ಒರ್ವನೆ ಸಾಲ್ದನ್,
ಕಂದನ್, ಪೊಯ್ವಾಕ್ರೋಶದ ತೆರೆಯೊಳ್.

ಮೇಳನಾಯಕನ್

ಏನದು ಕೊಱೆದುದು ತೊಟ್ಟನೆ ಇರುಳೊಳ್
ನಿನ್ನೆಯ ಭಾಗ್ಯದ ಬಳವಿಯ ತಿರುಳೊಳ್?
ಭಾರ್ಗವಕುಲದಾ ರತ್ನಮೆ, ನಲ್ಲಯ್,
ದ್ರೋಣನ ತಾಯೇ, ಅಱಿಯದಳಲ್ಲಯ್,
ಅಶ್ವತ್ಥಾಮನ ಬಗೆಯನ್ ಬಲ್ಲಯ್.

ಅಱಿವು ಎಮಗದನ್. ದಿಟಮನ್ ಕೇಳ್ವಿನ್.

ಭಾರ್ಗವಿ

ಆಡಬಾರದುದನ್ ಎಂತಾಡುವೆನೋ!
ಸುರಿವೆನ್ ಕಿವಿಯೊಳಗುರಿಯನ್ ಅದೆಂತೋ!
ಇರುಳ್ ಉನ್ಮತ್ತನ್, ಅಶ್ವತ್ಥಾಮನ್,
ಕೀರ್ತಿಯನ್ ಒರ್ಮೆಯೆ ಕೊರಲನ್ ಮುಱಿದನ್.
ನೆತ್ತರ್! ನೆತ್ತರ್! ಕಟುಕರ ಕಡಿತಂ!
ಅವನಸಯೆ ಕಯ್ಯೊಳ್ ಪಶುಗಳ ಯಜ್ಞಂ!

ಮೇಳಂ

ಏನ್ ಪೇೞ್ಕೆ ಪೇೞ್ದೆ ನೀನ್, ಮುತ್ತಬ್ಬೆ, ಘೋರಂ!
ಕಾೞ್ಕಿರ್ಚಿಸನ್ನಸದು, ಮುೞ್ಚಿದುದು, ಕ್ರೂರಂ!
ದಿಟವಾಯ್ತು, ದಿಟವಾಯ್ತು, ಪಾಂಡವರ ಕೂಗು!
ಅಕ್ಕಟಾ, ಅಕ್ಕಟಾ, ಇನ್ನಾಗುವಾಗು!
ಸೇನೆಯಿದಿರೊಳ್ ನಿಲಿಸಿ ಕೊಲ್ಲರೇ ಇಂದು,
ತೇಜಮನ್ ಕಿಡಿಸಿ, ಭೀಮಾರ್ಜುನರ್ ಬಂದು,
ಸಮ್ಮ ಬೀಡೊಳ್ ನುಸುಳ್ದು ನಿದ್ದೆ ಬಿಗಿದಂದು
ತುಱುಗಳನ್, ಕಾವಲರನ್ ಇಱಿದೊನ್ ಇವನೆಂದು!

ಭಾರ್ಗವಿ

ಆತ್ತಣಿನೋ, ಆತ್ತಣಿನೋ,
ಮಂದೆಯೊಡನೆ ಬಂದುದವನ್!—
ಕರುಳಿಱಿದುಂ, ಗೋಣ್ ಮುಱಿದುಂ,
ನೆತ್ತರ ತೊಱೆ ಮಿಂದನವನ್;
ಜರ್ಗಿಸಿ, ಗೂಳಿಯನ್ ಒಂದನ್
ನಾಲಗೆಯನ್ ಸೀಳ್ದನ್ ಅವನ್;
ಕಂಬಕೆ ಬಿಗಿದೊದೆದೊದೆದು,
ಕೀಱುವ ಕುಱಿ ಪೊಯ್ದನ್ ಅವನ್;
ಪೊಯ್ಯೆಡೆಯೆಡೆ, ಬಯ್‌ಬಯ್ದು ನಲಿದನ್ ಅವನ್—

ಮೆಯ್ಯ ಮರುಳ್, ತಾನಲ್ಲನ್, ನಲಿದನ್ ಅವನ್.

ಮೇಳಂ

ಇಲ್ಲಿರದೆ, ಕಳ್ಳನವೊಲ್ ಆನ್ ಓಡಿಪೋಪೆನ್!
ತಳ್ವದೆ ಮೊಗಂಮುಚ್ಚಿ ತಲೆಮಱಸಿ ಪೋಪೆನ್!
ಏಕಲವ್ಯನ್ ಅದೇಕೆ ಈ ಕಳಕೆ ಬಂದನ್!
ಎಮ್ಮ ನಾಯಕನ್ ಎನ್ನನ್ ಏಕಿಲ್ಲಿ ತಂದನ್!
ಕೃಷ್ಣಭೀಮರ್ ಪಿಡಿದು ಕೊಲ್ಲದಿರರ್ ಎನ್ನನ್.
ಕಲ್ಲಿಟ್ಟು ದೞಮೆಲ್ಲ ಕೊಲ್ಲದಿರದೆನ್ನನ್.
ಓ ಗುರುವೆ, ಪೊರೆವರ್ ಆರ್ ಎನ್ನನ್, ಅಹ, ನಿನ್ನನ್!
ಉಗ್ರವಿಧಿ ಎೞೆದಾಡುತಿರ್ಪುದೇ ನಿನ್ನನ್!

ಭಾರ್ಗವಿ

ಇಲ್ಲೀಗಳ್, ಇಲ್ಲೀಗಳ್,
ಸಿಡಿಲ್ ಬಡಿದು ಪೋಯ್ತು;
ಕಾರ್ಮೞೆಯ ಬಿಱುಗಾಳಿ
ಮೊದಲುಱುಬು ಸಯ್ತು.
ಅಱಿವು ಮಗುಳ್ದೆಚ್ಚತ್ತುಂ,
ಪೊಸ ದುಃಖಮಾಯ್ತು.
ಆ ನೋವು ಕೂರಿತ್ತು, ಕಯ್ಯಾರ ನಾಮೆ
ಕೊಂಡೆಸಗಿ ಕಣ್ಣಾರ ನೋಡುವೞಿಗೆಮ್ಮೆ.

ಮೇಳನಾಯಕನ್

ಅವನುಬ್ಬಸಂ ಪಱಿಯೆ, ಎಲ್ಲಮೊಳ್ಳಿತೆ ಅಕ್ಕುಂ.
ಎಳ್ಳನಿತೆ ಕಳೆದೞಲ್.

ಭಾರ್ಗವಿ

ನೀನ್ ಆವುದಾಯ್ದಪಯ್—
ಆಯಲಿರೆ—ನೀನ್ ನಲಿದು, ಕೆಳೆಯರನ್ ಕೊರಗಿಪೆಯೊ?
ಕೆಳೆಯರುಂ ಕೊರಗುತಿರೆ, ನೀನುಮ್ ಒಡನೞಲ್ದಪೆಯೊ!

ಮೇಳನಾಯಕನ್

ಇರ್ವರುಂ ಕೊರಗುವುದೆ, ಅಮ್ಮಯ್ಯ, ಪೆರ್ಕೊರಗು.

ಭಾರ್ಗವಿ

ಇಂತೆಮಗೆ ಪೆರ್ಕೊರಗು—ಆ ಪುರ್ಚು ಪಱಿದೊಡಂ.

ಮೇಳನಾಯಕನ್

ಏನಿದಿಂತೆಂಬೆಯೇ! ತಿಳಿಯದೆನಗೀ ಮಾತು.

ಭಾರ್ಗವಿ

ಆತನ್ ಆ ಕುತ್ತದೊಳ್ ಭ್ರಾಂತಿಗಳ ಬಡಿತದೊಳೆ
ಆನಂದಮನ್ ಸವಿದನ್—ಅಱಿದೆಮಗೆ ದುಃಖಮೇ
ಆದೊಡಂ. ಈಗಳೋ, ಬುದ್ಧಿ ಬರೆ, ಚೇತರಿಸಿ
ಅವನ್ ಎೞ್ದು, ಮೊದಲಿಂದೆಯುಂ ಪಿರಿಯ ದುಃಖದೊಳ
ಗೞ್ದಿದನ್. ನಾವೊ, ಮೊದಲಂತೆಯೇ ದುಃಖಿಗಳ್,
ಕುಂದಿಲ್ಲ. ಒಂದು ಪೋಯ್ತೆರಡಾಯ್ತು ದುಃಖಂ!

ಮೇಳನಾಯಕನ್

ಒಪ್ಪಿದೆನ್. ದೇವತೆ ಅದಾವುದೋ ಕಾಡುಗುಂ.
ಇಲ್ಲದೊಡೆ, ಗುಣಮಾಗಿಯುಂ ರೋಗಿಯಂತೆಯೇ
ನರಲ್ವನೇ?

ಭಾರ್ಗವಿ

ನರಲ್ವನೆಂಬುದು ನಿಜಂ, ನಂಬು.

ಮೇಳನಾಯಕನ್

ಎಂತು ಮೊದಲ್ ಎಱಗಿತೋ ಈ ಪಾೞುಪದ್ರವಂ?
ಅಱಿಪುವೆಯ ನಡೆದುದನ್? ನಿನ್ನೞಲ್ ನಮ್ಮದುಂ.

ಭಾರ್ಗವಿ

ಪಾಲ್ಗಱಿರ್ ಅಣ್ಣಂದಿರ್! ಎಲ್ಲಮನ್ ಪೇೞ್ವೆನ್.—
ನಲ್‌ನಿಶೆಯೊಳ್, ಆಱುತಿರೆ ಸಂಜೆಯುರಿ, ಇರ್ಬಾಯ ಖಡ್ಗಮನ್ ತುಡುಕಿ
ಗುಱಿಯಿಲ್ಲದೆತ್ತಲೋ ತೆರಳ್ವನನ್ ನಾನ್ ತಡೆದು, ಏನಿದೀ ಪೊೞ್ತು
ನಡೆವುದಶ್ವತ್ಥಾಮ? ಬೞಿಯಟ್ಟದೇ, ಕಾಳೆ ಕೂಗದೇ, ಬೞಲ್ದು

ಪಡೆಯೆಲ್ಲಮ್ ಒಱಗಿರ್ಕುಮೇ ಎಂದೆನ್. ಪೊಯ್ವೆತ್ತ ಪಾವಂತೆ ಮೊರೆದು,
ಪೆಣ್ ಬಲ್ಲ ಮಾತಿನೊಳ್, ಬಾಯ್‌ಮುಚ್ಚಿರಲ್ ಚೆಲ್ವ ಪೆಣ್ಣೊಂದು ಗದಱಿ,
ಸೂಂಕಿ ಪೊಱಮಟ್ಟನ್. ನಾನ್ ಸುಮ್ಮನಾದೆನ್. ಏನಾಯ್ತೊ ಪೊಱಗೆ
ನಾನ್ ಅಱಿಯೆನ್. ಒಳಗಟ್ಟುತುಂ ಬಂದನ್ ಆಕಳನ್, ಗೂಳಿಯನ್, ಕುಱಿಯನ್,
ತುಱುಗಾವ ನಾಯ್ಗಳನ್, ಕಟ್ಟಿಕೊಂಡೆಲ್ಲಮನ್. ಕೊತ್ತಿದನ್ ಅದೊಂದನ್,
ಕೊರಲ್ ಮುಱಿದನ್ ಒಂದನ್, ತಲೆವೊಯ್ದನ್ ಒಂದನ್, ತುಯ್ದೊಗೆದನ್ ಒಂದನ್.
ಚಿತ್ರಹಿಂಸೆಯೆ ಆಯ್ತು ಒರ್ಕುಱಿಗೆ! ಆಳೆಂದು ಪೊಯ್ದುವವೊ ಪಶುಗಳ್!
ಕಡೆಗೆ, ಪೊಱಗಡೆ ಓಡಿ, ಬಱಿಯ ಬಯಲೊಳಗದಾರೊಡನೆಯೋ ನಗುತೆ,
ಭೀಮಂಗೆ, ಪಾರ್ಥಂಗೆ, ಕೃಷ್ಣಂಗೆ ತೀರಿಸಿದ ಮುಯ್ಗಳನ್ ಕೀಱಿ,
ಅಣಕಿಸುತೆ, ಪುರ್ಜನಗೆ ನಗುತಿರ್ದು, ಮತ್ತೆ ತಾನ್ ಒಳಗಣ್ಗೆ ಬಂದನ್.
ಆಗಳ್ ಅಹ! ಮೆಲ್ಲಮೆಲ್ಲನೆ, ಕಿಱಿದು ಕಿಱಿದಾಗಿ ಮುಗುಳ್ದತ್ತು ಜ್ಞಾನಂ!
ಕಣ್ ಸುೞಿದುದೆತ್ತಲುಂ; ಘೋರಕರ್ಮಂ ಕೊಳುತೆ, ಕೂಗಿದನ್ ; ತಲೆಯನ್
ಚಚ್ಚಿದನ್ ; ಧೊಪ್ಪೆನುತೆ ಕೆಡೆದನ್ ಆ ಕೆಡೆದ ಪೆಣಬಣಬೆಯೊಳ್ ; ತಱಿದನ್
ಬಲ್ಪಿಡಿಯುಗುರ್ಗಳಿನ್ ನವಿರ್ಗಳನ್. ಒಂದು ಮಾತಾಡದೆಯೆ ಕುಳ್ತನ್
ಬಲ್‌ಪೊೞ್ತು. ಬೞಿಕೆನ್ನನ್—ಓ ಭಯಮೆ!—ಬೆದಱಿಸುತೆ, ಪೇೞು, ಪೇೞೆಲಗೆ
ಏನಾಯ್ತಿದೇನ್ ಎನ್ನ ಪಾಡು, ಪೇೞ್ ಎಲ್ಲಮನ್. ಪುಸಿಯದಿರ್, ನೋಡು,
ಎಂದೊಡಱಿದನ್. ಬೆದಱಿ, ಕೆಳೆಯರಿರ, ಕಂಡುದನ್ ಕಂಡಂತೆ ಪೇೞ್ದೆನ್.
ಕೇಳ್ದು ಕೇಳ್ದಿರ್ದೆ ಬಿರಿಯೆ, ಪಿಂತೇಗಳುಂ ಕೇಳದೊಂದೞ್ಕಿಯೞ್ತನ್!
ಪಿಂತೆನಗೆ ಪೇೞ್ವನ್, ಆ ಅೞ್ವುದೆಲ್ಲಂ ಪೇಡಿಗಳ್ಗೆ, ಪೆಣ್ಣಾಳ್ಗೆ!
ತಾನೆಂದುಮ್ ಅಂತೞನ್; ಸಿಂಹದವೊಲ್ ಆೞದೊಳೆ ನರಲ್ವೊಡೆ ನರಲ್ವನ್.
ಇಂತೆನ್ಬನ್ ಈ ಘೋರದೊಳ್ ಸಿಲ್ಕಿ, ಉಣ್ಣದೀಂಟದೆ, ತಾನೆ ಇಱಿದ
ತುಱುಗಳೆಡೆ ನುಡಿಯದೆಯೆ ಕುಳ್ಳಿರ್ಪನ್—ಏನನೋ ಬಗೆಯುತ್ತುಮಿರ್ಪನ್.
ನಲ್ಲದನ್ ಬಗೆಯನೇ! ಅದೊ ಕೇಳಿಂ ಆ ನರಲ್ವ ನರಲ್ಗಳನ್! ಬನ್ನಿಂ,
ಆದುದನ್ ನೀಮ್ ಮಾಡಿಂ, ಆತನನ್ನರ್ ಕೇಳ್ವರ್, ಸಂತೈಸೆ ಕೆಳೆಯರ್.

ಮೇಳನಾಯಕನ್

ಪರಶುರಾಮನ ತಂಗೆ, ಭಾರ್ಗವೀ, ಪೊಲ್ಲದೇ
ಈ ಸುದ್ದಿ— ಬಸವೞಿದನೇ ಮರುಳ್ದು ನಮ್ಮ ಕಲಿ!

[ಒಳಗೆ] ಅಶ್ವತ್ಥಾಮನ್

ಅಯ್ಯೋ ಪಾಪೀ—ಅಯ್ಯೋ ಪಾಪೀ!

ಭಾರ್ಗವಿ

ಓ ಇನ್ನುಮೇನ್ ಪೊಲ್ಲದಕ್ಕುವೋ ಅಱಿಯೆನೇ!
ಕೇಳ್ದಿರ್ ಅಶ್ವತ್ಥಾಮನನ್? ಕೇಳ್ದಿರ್ ಆ ಕೂಗನ್!

ಅಶ್ವತ್ಥಾಮನ್

ಅಯ್ಯೋ ಪಾಪೀ! ಅಯ್ಯೋ ಪಾಪೀ!

ಮೇಳನಾಯಕನ್

ಪೊಸ ಪುರ್ಚೊ? ಮೊದಲ ಪುರ್ಚನ್ ಕಂಡು ಸಂಕಟವೊ?

ಅಶ್ವತ್ಥಾಮನ್

ಮಗೂ, ಮಗೂ!

ಭಾರ್ಗವಿ

ಕೆಟ್ಟೆನ್ ಆನ್! ಏಕೆ ಕರೆವನ್ ರುದ್ರಶಕ್ತಿಯನ್?
ಏನೆಣಿಕೆಯೋ ಕಾಣೆನ್! ಏನ್ ಬಂದುದೆಮಗಿಂದು!

ಅಶ್ವತ್ಥಾಮನ್

ಏಕಲವ್ಯಾ, ಏಕಲವ್ಯಾ—
ಅವನ ಬೇಂಟೆಯೋ ಮುಗಿಯುದೆಂದುಂ!
ಇಲ್ಲಿ ನಾನೋ ಸಾಯುತಿರ್ಪೆನ್!

ಮೇಳನಾಯಕನ್

ಪುರ್ಚಲ್ತು. ಪೋ ತೆಱೆಯು, ಬಾಗಿಲನ್ ತೆಱೆಯು.
ಆತನ್ ಎಮ್ಮನ್ ಕಂಡು ಶಾಂತನಾದಪ್ಪನ್.

ಭಾರ್ಗವಿ

ಇದೊ ತೆಱೆದೆನ್. ನೋಡಿಮ್ ಆತನ ಕೆಲಸಮನ್, ಪಾಡನ್.

[ಪಶುಗಳ ನಡುವೆ ಅಶ್ವತ್ಥಾಮನ್]

ಅಶ್ವತ್ಥಾಮನ್

ಓವೊ ಕೆಳೆಯರಾ, ನಲ್ಲ ಬೇಡರಾ,
ಎನಗೆ ಪೇಸದೆಯೆ ಇನ್ನುಮ್ ಇರ್ಪಿರಾ?

ನೋಡಿಮ್, ಆವ ತಿರೆ ತಲೆಯಮೇಲುರುಳ್ದು
ಬಳಸಿಕೊಂಡುದೆನ್ನನ್!

ಮೇಳನಾಯಕನ್

ನೀನ್ ಪೇೞ್ದುದಾವುದುಂ ಪೆರ್ಚಲ್ತು, ತಾಯೆ.
ಪ್ರಜ್ಞೆಯಿರ್ದರ್ ಮಾಳ್ಪ ಕೆಲಸಮೇ ಈ ಕೆಲಸಂ?

ಅಶ್ವತ್ಥಾಮನ್

ಕಾಡೊಳ್ ಎನಗೆ ಒಡನಾಡಿಯಾದವರ್,
ಬಿಲ್ಲನ್ ಒಡನೆಱೆದು ಬೇಂಟೆಯಾಡಿದರ್,
ನೀಮೆ, ನೀಮೆ ಗತಿ, ಕೊಲ್ಲಿಮ್ ಎನ್ನುಮನ್,
ಕೊಲ್ಲಿಮ್ ಎನ್ನನ್ ಎಲ್ಲರ್.

ಮೇಳನಾಯಕನ್

ಕೆಟ್ಟ ಮಾತಾಡದಿರು. ಮರ್ದಲ್ತು ಪೊಲೆಗೆ ಪೊಲೆ.

ಅಶ್ವತ್ಥಾಮನ್

ಕಾಣ, ಕಾಣ, ಕೆಚ್ಚೆರ್ದೆಯ ಶೂರನನ್!
ಪಗೆಗೆ ತೆಗೆಯದಾ ರಣದ ಧೀರನನ್!
ತುಱುಗಳ್ ಅಱಿಯದುವನ್ ಒರ್ವನ್ ಇಱಿದವನ್!
ಆಹ ಧೀರನ್! ಆಹ ಶೂರನ್!
ಪೆಸರೊ, ಹೋ, ರುದ್ರಾವತಾರನ್!

ಭಾರ್ಗವಿ

ಇಂತಾಡದಿರು, ಬೇಡ; ಬೇಡಿಕೊಳ್ವೆನ್, ಕಂದ.

ಅಶ್ವತ್ಥಾಮನ್

ಪೋಗು, ಪೋಗೆಲಗೆ, ತೊಲಗು, ತೊಲಗು.
ಓ ಪಾಪೀ, ಓ ಪಾಪೀ!

ಭಾರ್ಗವಿ

ತಾಳ್ದುಕೊಳ್, ತಡೆದುಕೊಳ್.

ಅಶ್ವತ್ಥಾಮನ್

ಅಯ್ಯೋ ಪಾಪಿಯೇ, ಪರಮ ನೀಚಠನ್

ಸುಣ್ಣೆ ಪೋಗವಿಟ್ಟಕಟ! ಪಶುಗಳನ್
ಪೊಯ್ದು ನೆತ್ತರನ್ ಕೋಡಿಕೆಡಪಿದಯ್!

ಮೇಳನಾಯಕನ್

ಆದುದನ್ ನೆನೆನೆನೆದು ಪಂಬಲಿಸಲ್ ಅಪ್ಪುದೇನ್?
ಆದುದಾಗಿಯೆ ಪೋಯ್ತು. ಅದನ್ ಅಱಿಸಬರ್ಕುಮೇ?

ಅಶ್ವತ್ಥಾಮನ್

ಎಲವೊ ಕೃಷ್ಣಾ! ಮರ್ಮಘಾತಕಾ!

[ಪೊಱಗೆ ನೆಗೆದು ಬಂದು]

ಆವುದಾಗುವೊಡಮಲ್ಲಿ ನಿನ್ನ ಕಣ್.
ಆವುದೆಸಗುವೊಡಮಲ್ಲಿ ನಿನ್ನ ಕಯ್.
ಶತ್ರುಪಕ್ಷದೊಳ್ ಬಿಡದ ಶತ್ರುವೇ,
ನಿಲಿಸಲಾಱದೆಯೆ ನಗುತುಮಿರ್ಪೆಯೇ!

ಮೇಳನಾಯಕನ್

ದೇವರ್ ಇತ್ತಂತೆಯೇ ನಾಮ್ ನಗುವುದಱ್ಪುದು.

ಅಶ್ವತ್ಥಾಮನ್

ಮುಱಿದೆನಾದೊಡಂ—ಇದಿರ್ಗೆ ಬಾರನೇ!

ಮೇಳನಾಯಕನ್

ಸೊರ್ಕುನುಡಿ ನುಡಿಯದಿರ್. ಕಾಣದೇ ಈ ಪಾಡು?

ಅಶ್ವತ್ಥಾಮನ್

ಓ ರುದ್ರ! ಗುರುದೇವ! ಎನ್ನ ಗುರುವಿನ ಗುರುವೆ!
ಕೊಲೆ ಕುಡಾ ಮಾಯಾವಿಯೊರ್ವನನ್, . ಕ್ಷುದ್ರನನ್!
ಕೀಱ್ ಭೀಮನೊರ್ವನನ್. ಬೞಿಕ್ಕೆನ್ನುಮನ್ ಕೊಳ್.

ಭಾರ್ಗವಿ

ಎನ್ನುಮನ್ ಕೊಳ್ಳೆಂದು ಬೇಡಿಕೊಳ್. ನೀನ್ ಸಾಯೆ,
ನಾನ್ ಆರ್ಗೆ ಬಾೞ್ವೆನ್?

ಅಶ್ವತ್ಥಾಮನ್

ಓ ಮರ್ಬೆ, ಎನಗೆ ಬೆಳಕೇ,

ಕಟ್ಟಿಲೆಯೆ, ಬಿಸಿಲ ಪೊಳಪೇ,
ಕೂಡಿಕೊಳ್, ಕೂಡಿಕೊಳ್, ನಿನಗೊಕ್ಕಲ್ ಅಪ್ಪೆನ್.
ಪ್ರಭುಗೆ ಮೊನೆಗಾಗದೊನ್ ಪಗೆ ತೀರ್ಚಲ್ ಎಱಿತ್ದಿನ್,
ವಿಧಿ ತೊಡರೆ, ತುೞುಗಳೊಳ್ ಬಿೞಿತ್ದಿನ್;
ದ್ರೋಹನ್, ದುರ್ದೈವನ್, ಪೞಿಯುಳಿೞಿತೊಳ್ ಅೞಿತ್ದಿನ್.
ಬಾೞಿಲ್ ಇನ್ನರ್ಹನಲ್ಲನ್.
ಒಂದುಮನ್ ಪಾರ್ವನಲ್ಲನ್.
ಬಾನವರ ಮಾನವರ ಕಣ್ಣೊಳ್ ಇನ್ನೊಪ್ಪೆನ್.
ಸಾಲ್ಗುಗಮ್ ಈ ರುದ್ರನಣಕಂ,
ಕೊಲ್ಗುಗಮ್ ಈ ಶೂಲಿಯಣಕಂ,
ತಾನೇ ಮಹಾಬಲನ್ ಕಾಡುವೊಡೆ ಕಾಟಂ,
ಎತ್ತಲ್ ಓಡುವೆನೊ ಓಟಂ,
ಶರಣಾರೊ, ಶಾಂತಿಕೂಟಂ
ಎತ್ತಲೋ, ಎನಗೆ ಲೋಕಂ
ಮರುಳೆಂದು ಪಾಡುವುದೆ ಪಾಟಂ,
ಪೆಸರೊ ಕೆಸಱಿಂಟಿ ಶೋಕಂ,
ಪಶುಗಳೊಳ್ ಪಶುವಾಗಿ ಪಶುಪತಿಗೆ ನೋಟಂ—
ಕಣ್ಗಿಂಪುನೋಟಂ!

ಭಾರ್ಗವಿ

ಎಂದಿಂಗಮ್ ಆಡದುವನ್ ಆಡುವನೆ ಈತನ್,
ಪೆರ್ಮೆಯಾಳ್, ಇಂತಪ್ಪನ್, ಇಂತಪ್ಪ ಮಾತನ್!

ಅಶ್ವತ್ಥಾಮನ್

ಓವೊ, ಕನ್ನಡದ ನಾಡೇ,
ಮುನ್ನೀರ್ಮೊಱಿಂಗು ಕರೆನಾಡೇ,
ಮಲೆನಾಡೆ, ಪೊಸಲ್ನಾಡೆ, ಬಯಲ ಪೊನ್ನಾಡೇ,
ಪಲಕಾಲಮ್ ಆನ್ ಅಗಲ್ದಿರ್ದೆನ್.
ಅಲ್ಲಿ ಕಣ್ಮುಚ್ಚಲೆಂದಿರ್ದೆನ್.

ಅಶ್ವತ್ಥಾಮನ್

ಇಲ್ಲವೆನಗಾ ಪುಣ್ಯಂ, ಓ ಚೆಲ್ವು ನಾಡೇ!
ಎಲೆ ಕುರುಕ್ಷೇತ್ರಮೇ,
ಅಮೃತತೀರ್ಥಂಗಳೇ,
ಆರ್ಯನಗರಂಗಳೇ, ಸ್ವರ್ಗಂಗಳೇ,
ದಿವ್ಯಜನಮೇ, ಮನಮೆ,
ತಂದೆಯೊಡನೆಳಮೆಯೊಳೆ
ನಿಮ್ಮೊಳ್ ಒಂದಾದೆನ್.
ಆಳ್ದಂಗೆ ನಚ್ಚಿನಾಳಾದೆನ್.
ಸೊರ್ಕುನುಡಿ ನುಡಿವೆನ್—
ಇಂತಪ್ಪನ್ ಇಲ್ಲವೆಂದಾದೆನ್.
ಈಗಳೋ, ಇಂತಪ್ಪನ್ ಇಲ್ಲವೆಂದೇ ಆದೆನ್!
ಪುಡಿಯೊಳಗೆ ಪುಡಿಯ ಪುಡಿಯಾದೆನ್—
ನಾಣ ನುಡಿಯಾದೆನ್.

ಮೇಳನಾಯಕನ್

ಇಂತಪ್ಪ ದುಃಖಮನ್ ತಡೆಯಲ್ಕಮಾಱಿನ್;
ನುಡಿಯೆಂದು ನುಡಿಯಲ್ಕಮಾಱಿನ್.

ಅಶ್ವತ್ಥಾಮನ್

ಆಹ! ಎನ್ನ ಪೌರುಷಮೆ! ಎನ್ನೊಂದು ಭಾಗ್ಯಮೋ! ಪೂಜ್ಯರೊಳ್ ಪೂಜ್ಯನ್
ಎಮ್ಮಯ್ಯನ್ ಏಗಳುಂ. ರಾಜಗುರು, ಧರ್ಮರುಚಿ, ಶಿಷ್ಯಶತಭಕ್ತನ್, ?
ಯೋಧಾಗ್ರಗಣ್ಯನ್, ಬ್ರಹ್ಮಜ್ಞರೊಳ್ ತಾನೆ ಬ್ರಹ್ಮನ್, ಸೌಮ್ಯನ್,
ಇಂತವನ್ ಜಗಮೆಱಗೆ ನೆಗಟ್ದಿನ್. ಕಾಯದೆಯೆ ತಂದೆಯೊರ್ ಪುಣ್ಯಂ,
ಕೈವಿಟ್ಟು ನಂಬಿದಾ ದೇವನ್, ನಾನೊ ಮಾನಂಗೆಟ್ಟು ಸಾವೆನ್!
ಬರ್ದುಕಿನೊಳಮ್ ಆವ ಸುಖಮನ್ ಕಣ್ಡೆನ್? ಆರ್ಗೆ ನಾನ್ ಪ್ರಾಣಮನೆ ತೆಱುವೆನ್,
ಆತ್ಮಕಲ್ಯಾಣಮುಮನ್ ಒತ್ತರಿಸಿ ನಾನ್ ಆರ ಕುಱಿತುದನೆ ಕುಱಿವೆನ್,
ಆ ಸ್ವಾಮಿಗಾನಲ್ತು ಮೊದಲೊಲ್ಮೆ, ಕರ್ಣನ್. ಸೇನಾಧಿಪತ್ಯಮೇ, ಕರ್ಣನ್;
ಶೃಂಗಾರಮೋ, ಕರ್ಣನ್; ಎಂಜಲ್ ಎಂಜಲ್ ನನಗೆ ಸಿಡುಕಂಗೆ—ಹುಂ!
ಈ ಸಮ್ಮ ಸುಖಪುರುಷರ್, ಆ ಕ್ಷುದ್ರದೇವತೆಗಳ್ ಏನ್ ಬಲ್ಲುವೆನ್ನನ್!

ಮೇಳಂ

ಬೇಡ, ಬೇಡಯ್, ಗುರುವೆ!

ಅಶ್ವತ್ಥಾಮ

ಸುಮ್ಮನಿರ್, ಸುಮ್ಮನಿರ್, ಸರ್ವಶಕ್ತರ್, ಬಲ್ಲೆನ್.
ಕಣ್ ಮಾಯೆ ಮುಸುಕದೇ, ಬಗೆ ಕದಡಿ ಗುಱಿಯಿಂದೆ ಪೊರಳದೇ, ಆರುಂ
ನಗಲಿರರ್, ಪಾಂಡವರ್, ಕೃಷ್ಣರ್! ಕಾದನ್ ಆ ರುದ್ರನ್, ಆ ರುದ್ರನ್,
ಉರಿಗಣ್ಣನ್, ಆರ ನಚ್ಚಲ್ಲದನ್, ಕಯ್ ತಡೆದು ಪೊಯ್ಯಲಿರ್ದೆನ್ನನ್
ಮರುಳ್ಗೊಳಿಸಿ, ಈ ಮೂಕಪಶುಗಳೊಳ್ ತೊಯಿಸಿದನ್ ನೆತ್ತರಿನ್ ಕಯ್ಯನ್.
ಈಗಳ್ ಅವರ್ ಉರ್ಬುವರ್ ಗೆಲವಾಗಿ—ಎನ್ನೊಲವಿನಿಂದಲ್ತು! ದೈವಂ
ತಪ್ಪಾಗಿ ನಡಸುವೊಡೆ, ಕಲಿ ಎಡಪುವನ್, ಪೇಡಿ ಬರ್ದುಕುವನ್ ನಗುವನ್.—
ಈಗಳ್ ಏನ್ ಗೆಯ್ವೆನ್? ಕಂಡಂತೆ, ದೇವರ್ಕಳ್ ಒಲ್ಲದನ್; ಬೀರರ್
ನಗುವ ಪಾಡಾದವನ್; ಈ ಎಲ್ಲಮನ್ ಪೊಱುವ ತಾಯ್ ಮುಟ್ಟೆ ಮುನಿವನ್.
ಈ ಪಾಳೆಯಂ ಬಿಟ್ಟು ತವರೂರ್ಗೆ ಪೋದಪೆನೆ, ವಿಂಧ್ಯಮನ್ ದಾಂಟಿ,
ಆವ ಮೊಗದೊಳ್ ಬರ್ಪ ಸಂಟರನ್ ನೋಟಿಪ್ಪೆನ್? ತಂದೆ ತಾನಿಲ್ಲಂ;
ಎನಗೊಂದು ಪೆರ್ಮೆ ತಾನಿಲ್ಲಂ. ಆಗದು, ಅದಾಗದೆಂದಿಂಗಂ.
ಮತ್ತೇನ್? ಪಗಲ್, ಸೂರ್ಯದೇವನೇ ಸಾಕ್ಷಿಯಿರೆ, ವೈರಿಗಳ ನಡುವೆ
ನೇರ್‌ನುರ್ಗಿ, ಒರ್ಮೆಯ್ಯೆ ಮೂದಲಿಸಿ, ಸುತ್ತಣಿನ್ ಬಂದು ನಡುವಂಬಿನ್
ಬಿಟ್ಟಿಪೆನೆ? ಅದು ಪಗೆಗೆ ಸಂತಸಂ, ಜಯದ ಮುಡಿ. ಬೇಱೇನ್? ಬೇಱೇನ್?
ಸಾಹಸಮನ್ ಏನಾನುಮೊಂದೆಸಗಿ, ಮಗನ್ ಅರಿಯ ಕಲಿಯೆ, ಎರ್ದೆಯುರ್ಕಿನ್
ತಾನ್ ಅೞಿದನೆಂಬುದನ್ ತೋಱಲೇವೇೞ್ಕುಮ್ ಎಮ್ಮಯ್ಯಂಗೆ ಗುರುಗೆ.
ಎಡೆಬಿಡದೆ ದುಃಖಂಗಳ್ ಒತ್ತುತಿರೆ ಬಾಟ ನೀಳ್ಪನ್ ಬಯಸಿ ತಾಳ್ಪನ್
ಅಂಜುಕುಳಿ, ಕೀೞಿನ್. ಪಗಲ್ ಪಗಲುಮ್ ಏನ್ ನಲಿವೊ ಮುಂತಣ್ಗೆ ಸರಿದು,
ಪಿಂಜರಿದು, ಸಾವಿನತ್ತಲೆ ಪೋಪ ಪಯಣಂ? ತೆಗೆ, ತೆಗೆ, ಒಲ್ಲೆನ್.
ನಾನ್ ಮೆಚ್ಚೆನ್ ಇಲ್ಲದಾಸೆಗೆ ಕಿರ್ಚು ಕಾಯಿಸುವ ಮುಕ್ಕನನ್. ತಕ್ಕನ್
ತಕ್ಕವೊಲ್ ಬಾಟ್ದಿಪನ್, ತಕ್ಕವೊಲ್ ಸತ್ತಪನ್. ಎನ್ನ ಬಗೆ ಕೇಳ್ದಿರ್.

ಮೇಳನಾಯಕನ್

ಈ ನಿನ್ನ ಮಾತುಗಳ್ ನಾಲಗೆಯ ತುದಿಯಲ್ತು,

ಪೊಡೆಯಿಂದೆ ಬಂದುವೇ, ಬಲ್ಲೆವ್ ಆವೆಲ್ಲರುಂ.
ಆದೊಡಂ, ದುಡುಕದಿರ್. ಕೆಳೆಯರ್ಗೆ ಕಿವಿಗೊಟ್ಟು
ಈ ಛಲಪಿಶಾಚಮನ್ ಬಗೆಯಿಂದೆ ಪೊಱಮಡಿಸು.

ಭಾರ್ಗವಿ

ಓ ಎನ್ನ ಕಂದ, ಅಶ್ವತ್ಥಾಮ! ವಿಧಿಯಿಂದೆಯುಂ ನರರ್ಗೆ ಕ್ರೂರಂ
ಬೇಱಿಲ್ಲ. ಭೃಗುವಂಶದೊಳ್ ಪರಶುರಾಮಂಗೆ ತಂಗೆಯೆನಲ್ ಒಗೆದೆನ್.
ಈಗಳ್ ಏನಾದೆನ್! ಕೇಳ, ದೈವೇಚ್ಛೆಯನ್. ಜಮದಗ್ನಿ, ಅಯ್ಯನ್,
ಎನ್ನನ್ ಆ ಋಷಿ ಭರದ್ವಾಜಂಗೆ ಕೊಟ್ಟನ್—ದಾನಮನ್ ಕೊಟ್ಟನ್.
ಆತನೊಡನಲೆದೆನ್ ಆನ್ ಕಾಡುಮನ್ ಮೇಡುಮನ್. ಆ ಬೀರಸಿರಿಯ
ಮಂಗಳದ ಕಳಶಮೆನೆ ಬಸಿಱಿತೊಳಗೆ ಲೋಕೈಕಬಾಣಸನ್ ದ್ರೋಣಸನ್ ಪೊತ್ತೆನ್.
ಮೊಗಗಾಣ್ಬ ಮುನ್ನಮೇ ಯಮನ್ ಉಯ್ದನ್ ಇನಿಯನನ್. ಪೊತ್ತನನ್ ಪೆತ್ತೆನ್,
ನಡಪಿದೆನ್, ಒರ್ವನಾಳ್ ಮಾಡಿದೆನ್. ಬಡತನದೊಳ್ ಎತ್ತಲುಂ ತಿರಿದು
ಬಾಳ್ವಿಂಗೆ ನೀನ್ ಮೂಡಿ, ತಾಯನ್ ಅಂದೇ ತಿಂದುಕೊಂಡಯ್. ಮಗುಗೆ
ಪಾಲ್ಗಿಲ್ಲ. ರಾಜರೊಳ್ ಕೆಳೆತನಂ, ಉಣಲ್ ಇಲ್ಲ. ಕಣ್ಗೆಟ್ಟ ಮಕ್ಕಳನ್
ಕುರುಧರೆಗೆ ಕರೆತಂದೆನ್. ಅರಸರೊಳ್ ಗುರುತನದ ಮನ್ನಣೆಯನ್ ಉಂಡೆನ್.
ಪೆರ್ಗಿಚ್ಚು ಭಾರತಂ ಪೊತ್ತಿತ್ತು; ಭಸ್ಮಮಾದನ್ ಮಗನ್; ಬೆಂದೊಡಲ್ಗೆನಗೆ
ನೀನೊರ್ವನ್ ಇರ್ದಪಯ್. ಪುರುಳಾಗು, ಮರುಳಾಗು, ಕಲಿಯಾಗು, ಪೇಡಿಯಾಗಣ್ಣ,
ನೀನೊರ್ವನ್ ಇರ್ದಪಯ್. ಪೋಗದಿರು, ಪೋಗದಿರು, ಕಾಲ್ಕಟ್ಟಿ ಬೇಡುವೆನ್
ಪೋಗದಿರು, ಓ ಎನ್ನ ಕಂದ ಅಶ್ವತ್ಥಾಮ! ಎನ್ನನ್ ಆರ್ಗಿತ್ತು ಪೋಪಯ್?
ನೀನ್ ಪೋದ ಮಱುಗಳಿಗೆ ಅಡಗಿರ್ದ ಶೂರರ್ ಎಲ್ಲರ್ ಬಂದು, ಸೆಳೆದು,
ಕೊಂಡು ಪೋಗೀ ತೊೞ್ತಿನೆಂದು ಬಯ್ವುಯ್ಯರೇ—ನಿನ್ನ ಮಗನೊಡನೆ!
ನಿಮ್ಮ ಕುಲಕಿದು ಜಸಮೆ? ನಿನಗೊಂದು ಕೀರ್ತಿಯೇ? ಇದನ್ ಎಣಿಸವೇಡಾ?
ನಿಮ್ಮಯ್ಯನನ್ ನೆನೆಯ—ಪುಸಿಸಾವುಗೇಳ್ದು ಬಿಲ್ಲನ್ ಬಿಸುಟು ಸತ್ತನ್.
ನಿನ್ನ ತಾಯ್ ಸೂಲ್ಮುಲುಕು ಮಱಿತು ನಿನ್ನನ್ ಪರಸಿ, ಬಾೞ್ ನೂಱಿನ್, ಅಣುಗ,
ಪಿರಿಯ ಪೆಸರಾಗೆಂದು ಮುತ್ತಿಟ್ಟು ನಡೆದಳ್. ಪಿತೃಲೋಕಕೀಗಳ್
ನೀನ್ ಪೋಗೆ, ಆನಂದಮೇನ್ ಅವರ್ಗೆ ಇದಿರ್ಗೊಳಲ್? ನಿನ್ನ ಮಗುವಿರ್ಕುಂ.
ಪಸುಗೂಸು, ತಾಯಿಲ್ಲ; ತಂದೆಯುಂ ತೊಱೆದನೆನೆ ಬೆಳೆವನ್ ಅವನ್ ಎಂತು?

ನೋೞ್ಪಿರ್ ಆರ್? ಕಲಿಪರ್ ಆರ್? ಒಲ್ದು ಪೆರ್ಮೆಯ ನೆಲೆಗೆ ತರ್ಪರ್ ಆರ್? ಪೇೞಿ.
ಓ ಎನ್ನ ಕಂದ, ಅಶ್ವತ್ಥಾಮ, ನೀನ್ ಸತ್ತು ಸಮ್ಮುಮನ್ ಸಾಯಿಪಯ್.
ನೀನಿಲ್ಲದಾರ್ ಇರ್ಪರ್ ಎನಗೆ? ಆವ ಮನೆ, ಆವ ಪೊಱೆ ಎನಗೆ?
ನಿನ್ನೊಳೇ ಎನ್ನ ಬಾೞ್. ಪೆಱವೇಡ ಒಲ್ಮೆ ಮತ್ತೊಲ್ಮೆಯನ್? ತಕ್ಕನ್
ನಲಿವನ್ ಒರ್ಕಡೆ ಪಡೆದು ಮಱೆದಪನೆ? ಮಱೆಯಲ್ಕೆ ತಕ್ಕನ್ ಎಂತಪ್ಪನ್?

ಮೇಳನಾಯಕನ್

ಅಶ್ವತ್ಥಾಮ, ಎನ್ನವೋಲೆ ನೀನ್ ಅವಳ್ಗೆ ಮಱುಗು, ಮಱುಗು.

ಅಶ್ವತ್ಥಾಮನ್

ಮಱುಗಿದಪೆನ್—ಮಱುಗಿದಪೆನ್—ಪೇೞ್ದ ಮಾತು ಕೇಳ್ವಳೋ?

ಭಾರ್ಗವಿ

ಪೇೞಿ, ಅಣುಗ, ಅಶ್ವತ್ಥಾಮ, ಏನೆ ಪೇೞಿ ಮಾಡುವೆನ್.

ಅಶ್ವತ್ಥಾಮನ್

ಎನ್ನ ಮಗನ್, ಎಲ್ಲಿ ಅವನ್? ಕರೆದುತಾರ, ನೋಡುವೆನ್.

ಭಾರ್ಗವಿ

ಬೆದಱಿದೆನ್ ಆನ್, ಕೂಸನ್ ಅದನ್ ಬೀಡ ಪೊಱಗೆ ಕೞಿಪಿದೆನ್.

ಅಶ್ವತ್ಥಾಮನ್

ಎನಗೆ ಬಂದ ಕಷ್ಟದೊಳೋ? ಬೇಱೆ ನೀನೆ ಬಗೆದೆಯೋ?

ಭಾರ್ಗವಿ

ಪಸುಳೆ, ಪಾಪ, ಓಡಿ ಬರಲ್ ಕಂಡು ಕೊಲ್ವೆ ಎಂದವಳ್.

ಅಶ್ವತ್ಥಾಮನ್

ಆಹ, ಇನ್ನದೊಂದು ಭಾಗ್ಯಮ್ ಎನಗೆ ತಕ್ಕುದುೞಿದುದು!

ಭಾರ್ಗವಿ

ಕಾವಲ್ ಇರ್ದು ತಪ್ಪಿಸಿದೆನ್ ನಾನ್ ಅದನ್.

ಅಶ್ವತ್ಥಾಮನ್

ಪೊಗೞ್ವಿನ್ ಅಜ್ಜಿ, ನಿನ್ನ ಮುಂದುಗಾಣ್ಕೆಯನ್.

ಭಾರ್ಗವಿ

ಈಗಳ್ ಏನೊ ನಿನ್ನ ಬೆಸನ್ ಮಾೞ್ಪುದು?

ಅಶ್ವತ್ಥಾಮನ್

ಮಗನನ್ ಒರ್ಮೆ ನೋಡುವೆನ್, ಮಾತಾಡುವೆನ್.

ಭಾರ್ಗವಿ

ಓಡಿ ನಾನೆ ಪೋದಪೆನ್—ತಂದಪೆನ್. [ಪೋಪಳ್

ಅಶ್ವತ್ಥಾಮನ್

ಬರ್ಪಳೋ? ಬಾರಳೋ?

ಮೇಳನಾಯಕನ್

ಬಂದಳ್ ಇದೋ ಬಂದಳ್.

[ಭಾರ್ಗವಿ, ರುದ್ರಶಕ್ತಿ]

ಅಶ್ವತ್ಥಾಮನ್

ಎತ್ತಿಕುಡು, ಬಾ ಎತ್ತಿಕುಡು, ಕಯ್ಗೆ. ಎನ್ನ ಮಗನಾಗೆ ಇವನ್ ಅಂಜನ್
ಈ ಘೋರಮನ್ ಕಂಡು. ಈಗಳಿಂದಮೆ ತಂದೆಯೊರಟುತನಕಿವನನ್
ಕುದುರೆಮುಱಿವೊಲ್ ತಿರ್ದಿ ಪೞಗಿಸಲ್ವೇೞ್ಕುಂ. ತಂದೆಯಿನ್, ಕಂದ,
ಮೇಲಾಗದೃಷ್ಟದೊಳ್; ಮಿಕ್ಕೆಲ್ಲ ನಡತೆಯೊಳಮ್ ಅವನಂತೆ ಆಗು.
ಪಱೆ ತೊಡದ ಪಿರಿಯ ಪೆಸರಾಗು. ಏನ್ ಸುಖಂ, ಏನ್ ಶಾಂತಿ, ಮುಖದೊಳ್!
ನೀನ್ ಅಱಿಯೆ ಈ ಎನ್ನ ಸಂಕಟಮನ್—ಅಱಿಯಮೆಯೆ ಸುಖಂ! ಅಱಿದ ಬೞಿಕೆ
ತಂದೆಯಾರ್, ನಿನ್ನುರ್ಕದೇನೆಂದು ತೋಱವೇೞ್ಕುಂ, ಮಗನೆ, ಪಗೆಗೆ.
ಅದುವರಂ, ತಣ್ಗಾಳಿಯೊಳ್ ಸುೞಿದು, ಪಸುಳೆತನಮನ್ ಸವಿದು, ಇವಳ,
ಈ ನಮ್ಮ ಮನೆಯ ದೇವತೆ ಇವಳ, ಕಣ್ಣಮಣಿಯಾಗಿ ನೀನ್ ಬಾೞಿಯ್.
ನಿಮ್ಮನ್ ಆರುಂ ಜಱಿಯರ್ ಆನ್ ಪೋಗೆ, ಅಂತಪ್ಪ ರಕ್ಷಕನನ್ ಇಡುವೆನ್.
ಎನ್ನ ತಂದೆಯ ಶಿಷ್ಯನ್, ಎನ್ನ ಕೆಳೆಯನ್, ಬೇಂಟೆಯೊಳಗೀಗಳ್ ಇರ್ದುಂ,
ಪೊೞ್ತುೞಿಯೆ ಬಾರದಿರನ್ ಆ ಏಕಲವ್ಯನ್. ಬೇಂಟೆವುಲಿಗಳಿರ,
ಕೆಳೆಯರಿರ, ನಿಮ್ಮೊಳಂ, ಅವನೊಳಂ, ಈ ಅೞ್ಕಱಿನ ಪೊಱೆಯನ್ ಇಟ್ಟೆನ್.
ಪೇೞಿಮ್ ಆತಂಗಿದನ್. ನಮ್ಮಿನಿಯ ನಾಡಿಂಗೆ ಈ ಮಗುವನ್ ಉಯ್ಯುಂ.
ಎಮತೊಂದು ಬೆಳೆಗೆ ಕಿಡಿ. ಎನ್ನಾಯುಧಂಗಳನ್ ಪಗೆಗಯ್ಗೆ ಬೀೞ
ಕುಡದಿರಿಂ. ಬಾ, ರುದ್ರಶಕ್ತಿ, ಪಿಡಿ ಈ ಬಿಲ್ಲನ್ ಅಂಬುಮನ್. ಪಿರಿಯ
ದೇವತೆಗಳಿನ್ ಬಂದುದಿದು–ಪರಶುರಾಮನದು–ದ್ರೋಣನದು—ನಿನ್ನ

ತಂದೆಯುದು–ಮೆಲ್ಲಗ್ಗಯ್ಗಳಿನ್ ಪಿಡಿಯು ಈ ದಿವ್ಯಧನುವನ್—ಅಹ, ಎಲ್ಲಿ,
ಪೂಡು—ಒಂದಂಬನ್—ಇಂತಿಂತು–ನಲ್ಲದಹ, ನಲ್ಲದು! ಗೆಲ್! ಗೆಲ್!

[ಬಾಗಿಲೊಳ್]

ಎನ್ನೊಡನೆ ಬರ್ಕೆ ಮಿಕ್ಕೆಲ್ಲಮುಂ. ಕರೆದುಕೊಳ್. ಬಾಗಿಲನ್ ಮುಚ್ಚು.
ಏನ್ ಇದೇನ್ ಕಣ್ಣೀರ್? ಅೞಿಬೇಡ—ಅೞಿಬೇಡ: ಅೞಿಕ್ಕೆ ಪೆಣ್! ಬಾ, ಒಳಗೆ.
ಪುಣ್ ಕೊಯ್ಯಲಿರ್ಪಂದು ಮಂತ್ರಮನ್ ಮಿಸುಕುವನ್ ಅವನ್ ಮರುಳ್ ವೈದ್ಯನ್.

ಮೇಳನಾಯಕನ್

ಕರ್ಬುನ ಕಡಿದಂತಿಂತು ನೀನ್ ನುಡಿಯೆ ಏನೆಂಬೆನ್?
ನಿನ್ನ ಕೂರ್ನಾಲಗೆಗೆ ನನ್ನ ಧೈರ್ಯಂ ಪೋಯ್ತು.

ಭಾರ್ಗವಿ

ಕಂದ, ಅಶ್ವತ್ಥಾಮ, ಏನ್ ನಿನ್ನ ತಱಿಸಲವು?

ಅಶ್ವತ್ಥಾಮನ್

ಕೇಳದಿರು, ಕೆಣಕದಿರು. ನಿನಗಡಕವಮ್ ಒಳ್ಳಿತ್ತು.

ಭಾರ್ಗವಿ

ಅಯ್ಯೊ ಎರ್ದೆ ನಡುಗುವುದು. ಬೇಡುವೆನ್, ಮಗನಾಣೆ,
ಆ ದೇವತೆಗಳಾಣೆ, ಎಮ್ಮನಿನ್ ತೊಱೆಯುದಿರ್.

ಅಶ್ವತ್ಥಾಮನ್

ಎನ್ನನಿನ್ ಮುಳಿಯಿಪಯ್. ಅಱಿಯೆಯಾ ದೇವತೆಗ
ಮೆನಗಮ್ ಇರ್ದಾ ಋಣಂ ಪಱಿದು ಪೋಯ್ತೆಂಬುದನ್?

ಭಾರ್ಗವಿ

ಬಾ, ವತ್ಸ. ಸಾಲ್ಗುಂ ಈ ಕ್ಷಾತ್ರಂ. ತವರಡವಿನೆಲೆಲೊಳ್
ಸಮಱುವಂ ಮಱಿದೆಱಿಕ್ಕೆಯ್ಯಾತ್ಮಮನ್, ತಪಮೆಸಗಿ.

ಅಶ್ವತ್ಥಾಮನ್

ತಪಂ! ಏನ್ ತಪಂ? ಏತಱಿಕ್ಕೆ? ಆರ್ಗೆ?
ಬಾೞ್ ಬಱಿಯದಾದಂದು, ಸಾವು ತಾನ್ ಪೂರ್ಣಂ?

ಭಾರ್ಗವಿ

ಹಾ! ಹಾ!

ಅಶ್ವತ್ಥಾಮನ್

ಕೇಳ್ವರ್ಗೆ ಮೇಲೋರ್ಗೆ ಬೇಡಿಕೊಳ್.

ಭಾರ್ಗವಿ

ನೀನ್ ಕೇಳೆಯಾ?

ಅಶ್ವತ್ಥಾಮನ್

ಎನ್ನ ಕಿವಿ ತುಂಬ ನೀನೆ!

ಭಾರ್ಗವಿ

ಕೆಟ್ಟೆನ್! ಕೆಟ್ಟೆನ್!

ಅಶ್ವತ್ಥಾಮನ್

ಒಳಗೆ ಬಾ, ಸಾಲ್ಗುಂ.

ಭಾರ್ಗವಿ

ಕರಗು ಕರಗೆಲೆ, ಕಂದ. ದೇವರ್ಕಳ್ ಒಸೆದಪರ್.

ಅಶ್ವತ್ಥಾಮನ್

ಮರುಳ್ ನೀನ್! ಕರಗಿಸುವಳ್ ಈಗಳ್ ಎನ್ನುರ್ಕನ್.

[ಪೋಪರ್. ಬಾಗಿಲ್ ಮುಚ್ಚುವುದು.

ಮೇಳಂ

೧ (೧)

ಚೆಲ್ವಿನ ನೆಲೆ, ಕಣ್ಗಳ ಬಲೆ, ಸುಖದೊಱೆತೆಯ ಬನವಾಸೀ,
ಬಳೆದಲೆದಾ ಕಾನ್‌ಮಲೆಗಳನ್ ಆನ್ ಮಱೆವೆನೆ, ಬನವಾಸೀ!
ಭಾರತದೀ ಸುಱಿಗಾಳಿಗೆ ಸಿಲ್ಕುತೆ ನಾನ್ ತಱಿಗಾದೆನ್;
ಪೆಱಿತೆ ತುಂಬುತೆ, ಪೆಱಿತೆ ತೇಯುತೆ, ಮನೆಗಾಣದೆ ಬಡವಾದೆನ್;
ನಿನ್ನನೆ ನೆನೆನೆನೆದೋ ತಾಯ್, ಪಂಬಲಿಸುವ ನೋವೊಂದೇ!
ಇನ್ನೆನಗೇನ್ ಆಸೆಗಳೋ, ಪಾರ್ವುದು ನಾನ್ ಸಾವೊಂದೇ!

೧ (೨)

ಪೆರ್ಮೆಯ ನೆಲೆ, ಪಡುಗಡಲಲೆ ಸುಖಮೆಱೆಚುವ ಬನವಾಸೀ,
ನೀನ್ ಕಱಿಪಿದ ಪೇರಾಳ್ಗಳ್ ಅದೇನಾದರ್, ಬನವಾಸೀ!
ಗುರು ಮಡಿದನ್: ಅಮರೆ ಮರುಳ್ ಗುರುಪುತ್ರನ್ ತಾನ್ ಮಡಿವನ್.

ನಿರ್ದಯದೈವದ ಕಯ್ಯಿನ್ ಬಿಡುಗಡೆಗಾಣದೆ ಮಡಿವನ್.
ಒರ್ವನೆ ಕುದಿಕುದಿಗೊಳ್ವನ್; ಒಲ್ವರ ನುಡಿಯುಮುಮನ್ ಒಲ್ಲನ್.
ಪಾಱಿತು ಮುನ್ನಿನ ಪೊಂಕಂ! ಮುನ್ನಿನವನ್ ತಾನ್ ಅಲ್ಲನ್!

೨ (೧)

ಬಾೞ್ಕೆಯ ಕಡೆಯೊಳ್ ಬಾಗಿದ ಮುದಿಯಳ್,
ತಾಯ್ ಇಲ್ಲದನನ್ ನಡಪಿದ ಮುದಿಯಳ್,
ಕಂದನ ಕೇಡನ್ ನೋಡಲೊ ಬೞ್ದಳ್?
ನರೆದಲೆ ದುಃಖದ ಮಡುವೊಳ್ ಬಿೞ್ದಳ್.
ಆರ್ ಕೇಳ್ದಪರ್ ಆ ಗೋಳನ್, ಸಲ್ಲದು,
ಸೋರೆಯ ನುಲಿನುಲಿ ಮೆಲ್ಲುಲಿಯಲ್ಲದು.
ಆರ್ವಳ್, ಚೀರ್ವಳ್, ಎರ್ದೆಯನ್ ಪೊಯ್ವಳ್,
ನವಿರನೆ ಕೀೞ್ವಳ್, ಬಿದಿಯನ್ ಬಯ್ವಳ್!

೨ (೨)

ಈ ಬಾೞಿಂದಂ ಸಾವುದೆ ಸುಖಮೇ!
ಮತಿ ಪಾೞಾಗಲ್ ಸಾವುದೆ ಸುಖಮೇ!
ಪೆರ್ಮನೆತನಮೇನ್, ಕಲಿತನದುರ್ಕೇನ್,
ಆಳ್ಗಳ ಸಾಲೊಳ್ ತಲೆಮೆಱೆ ಸೊರ್ಕೇನ್?
ದ್ರೋಣನ, ರಾಮನ ಕಲ್ಕೆಯೊಳಾದನ್
ಒಳಬೆಳಕಿಲ್ಲದ ಕಣ್ಕುರುಡಾದನ್,
ಮರುಳನ್ ಮೆಯ್ಯೊಳ್ ಕೂಡಿಸಿಕೊಂಡನ್.
ತನ್ನಱಿವನ್ ತಾನ್ ಓಡಿಸಿಕೊಂಡನ್.

[ಅಶ್ವತ್ಥಾಮ್ನನ್ ಖಡ್ಗಂಬಿಡಿದು. ಭಾರ್ಗವಿ]

ಅಶ್ವತ್ಥಾಮನ್

ಕಾಲಚಕ್ರಂ ಪೊರಳೆ, ಮುಚ್ಚಿದುದು ಬೆಳಕಕ್ಕುಂ, ಇರ್ದುದಿಲ್ಲಕ್ಕುಂ;
ಆಗದು ಇದೆನಲಪ್ಪುದೊಂದಿಲ್ಲ—ಘೋರ ಪ್ರತಿಜ್ಞೆಯುಂ, ಛಲಮುಂ,
ತಾಮೆ ತಾಮ್ ಓಡುಗುಂ! ಕದಲದೆಯೆ, ವಜ್ರಂಬೊಲ್ ಇರ್ದವನ್ ನಾನುಂ
ಈ ಪೆಣ್ಣ ಗೋಳ್ ಕೇಳ್ದು, ಎರ್ದೆ ಕರಗಿ, ಉರ್ಕುಡುಗಿ, ಬೇಱೆ ಬಗೆಯಾದೆನ್,

ಮಱುಗಿದೆನ್—ಪಗೆಗಿವಳ್ ತೊಱೆಲ್ವಾಗೆ, ಪಸುಳೆ ತರುವಲಿಯಾಗೆ, ಪೋಗೆನ್.
ಇನ್ನೊಂದು ಮಾಡುವೆನ್. ಈ ಕ್ಷೇತ್ರದೊಳ್ ಮೆಱೆವ ತೀರ್ಥದೊಳ್ ಮುಱುಗಿ
ತೊಳೆದಂಟಿದೀ ಕಱೆಯನ್, ಎನ್ನುಗ್ರದೇವತೆಯ ಕೋಪಮನ್ ತೆಗೆವೆನ್.
ಆಳ್ ಸುಱಿಯದೆಡೆಯೊಂದನ್ ಅಱಿಸಿ,. ಆಱಿಂ ತೋಡಿ, ಕಾಣದಂತಾರುಂ,
ಪೂೞ್ದಿಡುವೆನ್ ಈ ಕ್ರೂರ ಖಡ್ಗಮನ್—ಮೃತ್ಯುವುಂ, ಆ ಕಾಳರಾತ್ರಿಯುಂ ಪಿಡಿಗೆ
ಕಿೞ್ಕಿಲದೊಳ್ ಎಂದುಂ! ಇದನ್ ಎನಗೆ ಅಭಿಮನ್ಯು ಕೊಟ್ಟಂದು ತೊಟ್ಟು
ಒಳ್ಳಿತೆಂಬುದನ್ ಅಱಿಯೆನ್. ಅದು ನಿಜಂ, ಪಿರಿಯರ್ ಆಡುವ ಮಾತು: ಪಗೆಯ
ಮೆಚ್ಚೊಂದು ಮೆಚ್ಚಲ್ತು, ಒಳ್ಳಿತಾಗದು.—ಆಯ್ತು, ಮುಂತಣ್ಗೆ ಕಲ್ವಂ.
ಇನ್ ಮುಂದೆ, ಬಾಗುವೆನ್ ದೇವತೆಗೆ, ಪಾಂಡವರ್ಗೆಱಗುವೆನ್. ಆಳ್ವರ್
ಅವರಲ್ತೆ? ನಾಮ್ ತಱ್ಗಿವೇೞ್ಕುಂ. ಮೇಗಣಧಿಕಾರಕೆಂತಪ್ಪ
ರೌದ್ರಮುಂ ಶಕ್ತಿಯುಂ ಮೊೞ್ಗುವುದು. ಕೊಱೆಪಲ್ಲ ಕುಳಿರ ಹೇಮಂತನ್
ಪೊೞ್ತು ಬರೆ, ಮುಪ್ಪಾಗಿ, ಎಳಚಿಗುರ ಚೈತ್ರಂಗೆ ಬಱಿವಿಟ್ಟು ಪೋಕುಂ.
ಕಾರ್ಮುಸುಕು ರಾತ್ರಿ ಬೆಳ್ಗುದುರೆಗಳ ಸೂರ್ಯಂಗೆ ಬೆಸ್ನಿತ್ತು ಸರಿಗುಂ.
ಬಿಱುಗಾಳಿ ಬಡಿದಾರ್ದು ಕಡೆಗೆ ಕಡಲನ್ ತಣಿಪಿ ಎತ್ತಲೋ ಅಱೆಗುಂ.
ವಿಶ್ವಮನೆ ಸೆಱೆವಿಡಿದು ಕೆಡಪುವಾ ನಿದ್ರೆಯುಂ ಪಿಡಿದೆಂದುಮ್ ಇರದೆ
ಸಡಿಲವಿಟ್ಟೆಯ್ದುಗುಂ. ನಾಮ್ ಆರ್ ವಿವೇಕಮನ್ ಕಲ್ಲೆಮೆನೆ, ಮರ್ತ್ಯರ್?
ನಾನ್ ಇದೋ ಕಲ್ತಪೆನ್. ಪೊಸತೀಗಳ್ ಅಱಿತೆನೇ, ಪಗೆವನವನ್ ಒರ್ಮೆ
ಕೆಳೆಯನಪ್ಪನ್; ಕೆಳೆಯೆ ಪಗೆಯಪ್ಪನ್; ಅದಱಿಂದೆ ಕಟ್ಬೊಲ್ಮೆ ತಗದು.
ಕಡುಪಗೆಯುಮ್ ಆಗದು. ಮನುಜಂಗೆ ಸ್ನೇಹಮೆಂಬುದು ಪುಸಿಯ ನಚ್ಚು.—
ಈಗಳ್ ಎನಗೆಲ್ಲಮುಂ ನೇರ್ಪಕ್ಕುಂ. ಎಲೆ ತಾಯೆ, ನೀನ್ ಒಳಗೆ ಪೋಗು,
ದೇವತೆಗಳನ್ ಬೇಡು ಎನ್ನೆರ್ದೆಯ ಬಯಕೆಗಳ್ ಕೂಡಿಬರ್ಕೆಂದು. [ಭಾರ್ಗವಿ ಪೋಪಳ್
ಕೆಳೆಯರಿರ, ನೀಮುಮ್ ಇನ್ನವಳಂತೆ, ಎನ್ನ ಬಗೆಯನ್ ತಿಳಿದು ಸಲಿಸಿಂ.
ಏಕಲವ್ಯನ್ ಮರಳೆ, ನೀಂ ಪೇೞಿಮ್, ಎಮ್ಮೊಳಂ ನಿಮ್ಮೊಳಂ ಮಱುಕಮ್ ಇರ್ಕೆಂದು.
ನಾನ್ ಪೋಪೆನ್ ಎತ್ತ ಪೋಪುದೊ ಅತ್ತ. ಇನಿತಱೊಳೆ ಕೇಳ್ದಪಿರ್ ನೀಮುಂ
ಒಸಗೆಯನ್—ಈ ಸಂಕಟಂ ಕಳೆದು ಬಿಡುಗಡೆಯನ್ ಆಂತುದನ್ ನಿಮ್ಮ ವೀರನ್.
[ಪೋಪನ್

## ಮೇಳಂ

೧

ಹೋ! ಆನಂದಂ! ಪೇರಾನಂದಂ!
ನೆಗೆವಾ ಕುಣಿವಾ ಮಿಗುವಾನಂದಂ!
ಓ ಶಿವ, ಬಾರಯ್!
ಓ ಶಿವ, ಬಾರಯ್!
ಬೆಳ್ಳಿಯ ಬೆಟ್ಟದ ಕೋಡಿನ ಬೀಡಿನ್,
ತೆಂಕಣ ನಾಡಿನ ಕೋಯಿಲ ಕೋಡಿನ್,
ಒಂದೇ ನೆಗೆತಂ ನೆಗೆಯುತೆ ಬಾರಯ್.
ಬಾ, ನಟರಾಜಾ,
ಬಾ, ನಟರಾಜಾ,
ಲೋಕಂ ಪುಟ್ಟಲ್, ಲೋಕಂ ಸಾಯಲ್,
ದೇವತೆಗಳ ಗಣಮೆಲ್ಲಂ ಪಾಯಲ್,
ಒರ್ವನೆ ತಾಂಡವವಾಡುವ ರಾಜಾ,
ನಾಟ್ಯಂಗಲಿಸುವ ಓ ನಟರಾಜಾ,
ಕುಣಿವೆನ್, ಕಲಿಸೆನಗೀಗಳ್, ಬಾರಯ್,
ಕುಣಿವೆನ್, ಬಾರಯ್!
ಓ ಶಿವ, ಬಾರಯ್!

೨

ಕಣ್ಣಿನ್ ಚೆದಱಿತು ಕತ್ತಲೆ ಪಾರಯ್!
ನಮೆಯಾ ಭ್ರಮೆಯಾ ಕತ್ತಲೆ ಪಾರಯ್!
ಹೋ! ಆನಂದಂ!
ಪೇರಾನಂದಂ!
ಕಣ್ಣಿನ್ ಮುಸುಕಿದ ಕತ್ತಲೆಯೋಡಲ್,
ಬಗೆಯೊಳ್ ಶಿವನಾ ಬೆಳ್ವೆಳಗಾಡಲ್,
ಮೂಡಿತು ಸೂರ್ಯಂ—ಜೀವಾನಂದಂ!
ಓ ಶಿವ, ಶಂಕರ,

ಓ ಶಿವ, ಶಂಕರ,
ಬದುರ್ಕಿದನೇ ನಮ್ಮಶ್ವತ್ಥಾಮನ್!
ತಿರುಗಿದನೇ ಆ ರುದ್ರಪ್ರೇಮನ್!
ತಿರುಗಲ್ ಭಕ್ತಿಗೆ, ಸೇವೆಗೆ, ಶಂಕರ,
ಆಗದುದಾವುದು, ಓ ಶಿವ, ಶಂಕರ,
ಕುಣಿವೆನ್, ಕರುಣಿಸು, ನನಗಾನಂದಂ!
ಕುಣಿವಾನಂದಂ!
ಪೇರಾನಂದಂ!

[ದೂತನ್]

ದೂತನ್

ಅಣ್ಣಂದಿರ್, ಏಕಲವ್ಯನ್ ಬಂದನ್. ಒಡನೆ ಜೇನ್ ಮುಸುಱ್ವವೊಲ್ ಮುಸುಱಿ,
ಎಡಕೆ ಬಲಕೆೞಿದಾಡಿ, ಜಱಿದಾಡಿ, ದೞಿವೆಲ್ಲ, ಆ ಮರುಳ ಬಂಟನ್,
ಇರುಳ್ ಬಿೞ್ದು ತಲೆಗೊಱಿವ ಕಳ್ಳರ್; ಕಲ್ ಬೀಱಿಂ, ಕಲ್ ಬೀಱಿವೆಂದು
ಒಕ್ಕೊರಲ್ ಕೂಗಿದರ್. ನೆಗೆದತ್ತು ಕಯ್ಗೆ ಬಾಳ್. ಬಲ್ಗೊಲೆಗಳ್, ಬಾಳ್ಗಳಿಡೆವೊಕ್ಕು
ಸಂತೈಸದಿರೆ ಕೃಷ್ಣನ್. ಎಲ್ಲಿ ಅಶ್ವತ್ಥಾಮನ್? ಒರೆವುದೊಂದಿರ್ಕುಂ.

ಮೇಳನಾಯಕನ್

ಒಳಗಿಲ್ಲ, ಇದೆ ಪೊಱಗೆ ಪೋದನ್—ಮಾರ್ಪಟ್ಟು,
ಪೊಸ ಬಗೆಗೆ ಪೊಸತೊಂದು ಕುಱಿ ಪಿಟ್ಟು.

ದೂತನ್

ಅಹಾ! ಅವನ್
ಕೞಿಪಿದುದೆ ತಡವೊ? ಮೇಣ್, ಬಂದುದೇ ತಡವೊ ನಾನ್?

ಮೇಳನಾಯಕನ್.

ಏನಂತುಟವಸರಂ?

ದೂತನ್

ತಾನ್ ಮರಳ್ವನ್ನೆಗಂ,
ತಡೆದಿರಿಂ ಬೀಡಿನೊಳೆ ಎಂದೊಡೆಯನ್ ಅಟ್ಟಿದನ್.

ಮೇಳನಾಯಕನ್

ಪೇೞ್ದಿನೇ, ಇದೆತಾನೆ ಪೋದನ್—ನಲ್ಲದೇ :
ದೇವತೆಗೆ ಶಾಂತಿಯನ್ ಮಾಡುವುದೆ ಅವನೆಣಿಕೆ.

ದೂತನ್

ಪುರ್ಚು, ಪುರ್ಚು! ದಿವ್ಯ ಜ್ಞಾನಮಿರೆ ಕೃಷ್ಣಂಗೆ!

ಮೇಳನಾಯಕನ್

ಏನ್ ಅವನ್ ಪೇೞ್ದ ಕಣಿ? ನೀನ್ ಕಂಡ ಕಣಿಯುಮ್ ಏನ್?

ದೂತನ್

ಸುಮ್ಮನೆ ಕೇಳ್—ಕೇಳ್ದುದನ್ ಪೇೞ್ವೆನ್—
ಪಲ್ಮೊರೆವ ಬೀರರನ್ ಪಡೆಗಳನ್ ಬಿಟ್ಟೇಕಲವ್ಯನೊಡವಂದು,
ಮೈತ್ರಿಯೊಳ್ ಕಯ್ಪಿಡಿದು, ಕೃಷ್ಣನಿಂತೆಂದನ್—ಆ ಅಶ್ವತ್ಥಾಮನ್
ಈ ಪಗಲ್, ಈ ಪೊಳೆವಿದೊಂದು ಪಗಲ್, ಒಳಗಿರ್ಕೆ. ಪೊಱಗಣ್ಗೆ ಬಿಡದಿರ್.
ಏನಾಸುಮನ್ ಮಾಡಿ ಬೀಡಿನೊಳೆ ಮಱೆಯಿರಿಸು, ಬಾೞ್ವುದನ್ ಬಯಸೆ.
ಇದೊಂದು ಪಗಲ್, ಆ ರುದ್ರನಾಗ್ರಹಂ ಬಡಿವುದು, ಎಚ್ಚಱಿಕೆ! ಎಂದನ್.
ಮತ್ತಮ್ ಅವನೆಂದನ್—ಮಱೆಯುವಾ ಮಾತುಗಳ್—ಏಗಳ್ ಮನುಷ್ಯನ್
ತಾನ್ ಮನುಷ್ಯನೆ ಎಂಬುದನ್ ಮಱೆತು, ಕಡುಕೊರ್ಬಿ, ಒಳ್ಳಿತರ್ಕಿಲ್ಲನ್,
ಆಗಳೇ ದೇವರ್ಕಳ್ ಅವನ ಬಾೞ್ಗಿಡರೊಡ್ಡಿ ಕೆೞಗುರುಳೆ ಪೊಯ್ವರ್.
ಎಂದುಂ ಅಶ್ವತ್ಥಾಮನ್ ಈ ಪಾಂಗೆ! ಎಳವೆಯೊಳೆ, ಪರಸುತ್ತೆ ತಂದೆ
ಬಿಲ್‌ಜಾಣನಾದೆ, ಗೆಲ್: ಮೊದಲ್ ಎಱಗಿ ದೇವತೆಗೆ, ಪೌರುಷದೆ ನೀನ್ ಗೆಲ್—
ಅಯ್ಯನ್ ಇಂತೆನೆ, ಸೊರ್ಕಿ, ಮಗನ್ ಎನ್ಬನ್—ದೇವತೆಯ ಬಲಮ್ ಇರ್ದೊಡಯ್ಯ,
ಪೇಡಿಯುಂ ಗೆಲ್ದಪನ್. ಅವರ್ಗಳ ನೆರಂಬಾರದಾ ಗೆಲ್ಲವೆಣ್ಣ
ಮುಂದಲೆಯನ್ ಈೞ್ವೆನ್! ಏನ್ ಗರ್ವಂ! ಇನ್ನೊರ್ಮೆ ಮಹದೇವ ರುದ್ರನ್
ಯುದ್ಧದೊಳ್ ಮೇಲಿರ್ದು, ಇತ್ತ ಪಗೆ, ಇತ್ತ ಪೊಯ್, ಕೊಳ್ ಗೆಲವನ್ ಇತ್ತೆನ್,
ಎಂದುರ್ಬಿಸುತ್ತೆ ಬರೆ, ಸಿಡುಕಿನಿಂದಾಳ್ ಆಡಬಾರದುದನ್ ಆಡಿ,
ಎಲೆ ರುದ್ರ, ಅದೊ ಅವರ ಬೆಂಬಲಂ ಪೋಗು ; ಅಶ್ವತ್ಥಾಮನ್ ಇರ್ದ
ಮೊನೆ ಮುಱಿಯದೆಂದನ್. ಇಂತಪ್ಪ ನುಡಿಗಳಿನ್, ಆಳಾಗಿ ಪುಟ್ಟಿ
ಆಳ್ಗೆ ಮೀಱಿದ ಪೆರ್ಮೆಬಗೆಗಳಿನ್, ರುದ್ರನ ಕನಲ್ಕೆಯನ್ ತಲೆಗೆ

ತಂದುಕೊಂಡನ್. ಈ ದಿನಂ ಬರ್ದುಕಿದೊಡೆ, ನಾಮುಱಿಸಿಕೊಳಲಕ್ಕುಮ್ ಅವನನ್
ರುದ್ರಪ್ರಸಾದದಿನ್—ಇಂತು ಕೃಷ್ಣನ್ ತಿಳಿಪೆ, ಒಡನೆ ಬಂದೆವು: ಮುಂದೆ
ಓಡಿಸಿದನ್ ಎನ್ನನ್ ಎಚ್ಚಱಿಸಲ್ಕೆ. ಪೋಗಿರಲ್ ಮುನ್ನಮೇ ಪೊಱಗೆ,
ಸತ್ತನ್ ಅಶ್ವತ್ಥಾಮನ್.—ಇಲ್ಲ, ಇದು ಕೃಷ್ಣನದು ಪೊಸತೊಂದು ತಂತ್ರಂ!

ಮೇಳನಾಯಕನ್

ಅಬಿಲ ಮಗು, ಭಾರ್ಗವೀ, ಕೇಳ ಬಾ, ವಾರ್ತೆಯನ್.
ಶಾಂತಿ ಎಂಬುದು ನಮಗೆ ಇಲ್ಲಿಂದೆ ತೋಱುಗುಂ.

ಭಾರ್ಗವಿ

ಏಕಣ್ಣ, ಕೆಳರಿಪಿರ್, ಇದೆತಾನೆ ಮೇಲೆ ಮೇ
ಲೊತ್ತಿ ಬರ್ಪಱಲಿಂದೆ ಬಿಡುತೆಗೊಂಡಿರ್ದಳನ್?

ಮೇಳನಾಯಕನ್

ಈತನ್ ಅಶ್ವತ್ಥಾಮನನ್ ಕುಱಿತು ವಾರ್ತೆಯನ್
ಕೆಟ್ಟುದನ್ ತಂದೆಮ್ಮ ಪೊಡೆಗೆ ಕಿರ್ಚಿಕ್ಕಿದನ್.

ಭಾರ್ಗವಿ

ಏನಪ್ಪ, ಮುಱುಗಿಪೋದೆವೊ ನಾಮ್? ಅದೇನ್, ಅಱಿಪು.

ದೂತನ್

ಪೊಱಗವನ್ ಪೋಗಿರ್ದೊಡುಱಿವ ನಚ್ಚುಗೆ ಇಲ್ಲ.

ಭಾರ್ಗವಿ

ಪೋದನೇ!—ಏಕಿಂತು ನುಡಿವಯ್?

ದೂತನ್

ಏಕಲವ್ಯನ್ ಪೇೞ್ದನ್—ಒಳಗಿರ್ಕೆ ಬೀಡಿನೊಳ್;
ಪೊಱಗೆ ತಾನೊರ್ವನೇ ಪೋಗಲಾಗದು ಎಂದು.

ಭಾರ್ಗವಿ

ಅವನೆಲ್ಲಿ ಏಕಲವ್ಯನ್? ಇಂತೇಕೆ ಪೇೞ್ವಿನ್?

ದೂತನ್

ಬರುತಿರ್ಪನ್. ಈ ಪಗಲ್ ಪೊಱಗೆ ಸುಱಿಯಲ್ ಸಾವು
ನಮ್ಮ ವೀರಂಗೆಂದು ತಾನಾತನ್ ಬಣರ್ದಪನ್.

ಭಾರ್ಗವಿ

ಆಹ, ಇದು ನಿಶ್ಚಯಮೆ? ಆರ್ ಅವಂಗಱಿಪಿದರ್?

ದೂತನ್

ದಿವ್ಯ ಜ್ಞಾನಿ, ಕೃಷ್ಣನ್. ಉೞಿವು, ಅೞಿವೆಂದೆಂದು.

ಭಾರ್ಗವಿ

ಕಾಪಾಡಿಂ, ಓ ಕೆಳೆಯಿರ್! ಬೀೞ್ವ ಸಿಡಿಲ್ ತಪ್ಪಿಸಿಂ!
ಇತ್ತಲ್ ಓಡಿಂ ಕೆಲರ್, ತರಲ್ ಏಕಲವ್ಯನನ್.
ಮೂಡಲ್ ಕೆಲಂಬರ್—ಪಡುವಲ್ ಕೆಲಂಬರ್.
ಅಱಿಸಿಮ್ ಆತನ ಪಜ್ಜೆ ಪೋದ ಪಾೞ್ ಪೊಲಂಗಳಂ.
ತಿಳಿದೆನ್ ಈಗಳ್—ಪುಸಿದು, ನಂಬಿಸಿ, ಕೞಲ್ಚಿದನ್.
ಪೞಿತೆಯೊಲ್ಮೆಯನ್ ಬಿಸುಟನ್. ಅಯ್ಯೋ, ಮಗು, ಏವೆನ್?
ಕುಳ್ಳಿರಲ್ಕಾಗದು. ಆದನಿತು ಬೆನ್ನೊಳೇ ಬರ್ಪೆನ್.
ನಿಲ್ಲದಿರಿಂ, ಅಣ್ಣಂದಿರ್, ಓಡಿಂ. ತಡೆಯೆ ಪೊೞ್ತಿಲ್ಲು, ಓ ನಲ್ಲಿರ್.
ಪಿಡಿಯಲ್ಕೆನೇೞ್ಕುಮೇ ಸಾಯಲ್ ಓಡುವನನ್! [ಪೋಪರ್

[ಕುರುಕ್ಷೇತ್ರದ ಬೇಱೊಂದೆಡೆ ಕಾಡು]

ಅಶ್ವತ್ಥಾಮನ್

ನಿಶ್ಚಲಂ ನಿಂದುದೀ ಕಟುಕನ್. ನಂಬತಕ್ಕುದು—ಮಗುೞ್ದು ಕೊಲ್ಲುಗಂ.
ನ್ಯಾಯಮೇ, ಪೊೞ್ತಿರಲ್ ನೆನೆಯಲ್ಕೆ. ಮೊದಲೆ ಇದು ಆ ಶತ್ರುಮಿತ್ರನ್
ಅಭಿಮನ್ಯು, ಎನ್ನ ಕಱುಬಾದವನ್, ಸಮಯುದ್ಧದೊಳ್ ಮೆಚ್ಚುಗೊಟ್ಟ
ಕೊಡಗೆ ತಾನ್; ಪೆಱನಾಡ ನೆಲದಲ್ಲಿ ನಾಂಟಿರ್ಪ್ಪಂ; ಪೊಸತು ಮಸೆದೀಗಳ್
ಮೊನೆಗೊಂಡ ಕೂರ್ಪಿನದು; ನೋಡಿ ನಟ್ಟೆನ್ ನಾನೆ, ಒಡನೆ ಸಾವೀಯಲ್.
ಸಿದ್ಧಮ್ ಆಮ್ ಇರ್ಪ್ಪರುಂ. ಓ ರುದ್ರ—ಪ್ರಾರ್ಥಿಪುದು ಸಾವರ್ಗೆ ಧರ್ಮಂ—
ಎನಗೊಳ್ಳಿಯವನಾಗು. ದೊಡ್ಡ ವರಮಲ್ತು ನಾನ್ ಬೇಡುವುದು ನಿನ್ನನ್.
ಈ ಬಾಳಮೇಲ್ ಬಿೞ್ದು ನೆತ್ತರನ್ ಬಸಿವವನನ್, ಬಂದು ಮೊದಲ್ ಎತ್ತಲ್
ಏಕಲವ್ಯಂಗಱಿಪೆ, ಅಟ್ಟು ಆತನುಮನ್: ಪಗೆ ಮೊದಲ್ ಕಾಣಲ್,
ಎಱೆದಪರ್ ನಾಯ್ನರಿಗೆ ಪರ್ದುಗಳ್ಗೆರೆಯಾಗಿ. ಇದೊಂದು ಕೃಪೆದೋಱು.
ಓ ಅಗ್ನಿ, ಕರೆವೆನ್ ಆನ್, ಪಿತೃಲೋಕಕುಯ್ವೆ ನೀನ್: ಸುಖನಿದ್ರೆಗೊಳಿಸು,
ಅಳ್ಕದೆಯೆ ನೆಗೆದೆನ್ನ ಕರುಳ್ಗಳೊಳ್ ಖಡ್ಗಮ್ ಇಱಿದೊಡನೆ—ಮೆಯ್ದುಡವಿ.
ನಿಮ್ಮುಮನ್ ಕೂಗುವೆನ್, ಓ ಉಗ್ರಕನ್ನಿಕೆಯರ್, ಎಂದೆಂದುಂ ಇರ್ಪಿರ್,
ಎಂದೆಂದುಂ ಆಳ್ಗಳನ್ಯಾಯಮನ್, ರೋಷಮನ್, ನೋಡುತುಮೆ ಇರ್ಪಿರ್,
ಬಿಡದೆ ಬೆನ್ನೊಳೆ ಬಂದು, ಓ ಘೋರಮೂರ್ತಿಗಳ್, ಕಾಡುತುಮೆ ಇರ್ಪಿರ್,
ಇದೊ ನೋಡಿಮ್ ಓರೊರ್ವರ್ ಎಂತು ನಾಮ್ ಘಾತುಕರ ತಂತ್ರಕ್ಕೆ ತೊಡಕಿ,
ಕೈಗುಂದಿ ಬಿೞ್ದಪೆವು: ನಾನೆ ಕೊನೆ! ಪಿಳ್ಳೆ ಪೆಸರಿಲ್ಲಾಯ್ತು ಕೌರವಕುಲ ಶ್ರೀ!
ಬಿಡಬೇಡ, ಬಿಡಬೇಡ—ಬೆನ್ನಮುರ್ದ್ದು ಗಿಡಿಯಿಮ್ ಅವರ್ಗವರವರ ಕರ್ಮಂ!
ಬನ್ನಿಮ್, ಏೞಿಂ, ಕ್ರೂರಮಾತೆಯರ, ರೌದ್ರಿಯರ, ಕಟ್ಟುಗ್ರಮ್ ಎಱಗಿಂ,
ತೀರಿಸಿಂ ನಿಮ್ಮ ಕೋಪಂಗಳನ್ ಪಾಂಡವರ ಸೇನೆಯೊಳಗೊಂದುೞಿಯುಗುಡದೆ!
ನೀನುಂ, ಹಿರಣ್ಯರಥಮನ್ ಕೊಂಡು ಗಗನದೆೞ್ತರಮಡರ್ಪ ಓ ಸೂರ್ಯದೇವ,
ಎಮ್ಮ ಪಿರಿಯರ ನಾಡ ಮೇಲ್ನಿಂದು, ಮಲಯಗಿರಿಯೊಳ್ ಕುದುರೆಯೆೞಿದು,
ಪೇೞಿ, ಎನ್ನಿರ್ಕಡೆಯ ಬಳಗಕ್ಕೆ, ಎಳವೆಯೊಳಗೆನ್ನನ್ ಒಲ್ದರ್ಗೆ,
ಈ ಎನ್ನೞಿಲ್ಗಳನ್, ಪೆರ್ಮೆಬಗೆ ಸಾವನ್. ಅಹ, ಏನೊರಲ್ವರ್
ಕೇಳ್ದೊರ್ ಈ ಕಥೆಯನ್! ಊರೇ ಮೊೞಂಗದೇ ಗೋಳಾಟಮಿಟ್ಟು!

ಸಾಲ್ಗುಂ, ಸಾಲ್ಗುಮ್ ಈ ಕನಿಕರಂ. ಕೆಲಸಂ, ಕೆಲಸಂ!—
ಮೃತ್ಯು, ಓ ಮೃತ್ಯೂ, ಸೀನ್ ಬಾರ, ಬಾರಾ! ಇರಿರ್ ನಾನೆ ಬರ್ಪೆನ್
ನಿನ್ನ ಮರ್ಬಿನ ಮನೆಗೆ ಬಿರ್ದು. ನೀಮ್ ಎಲ್ಲಿ ಇನ್ನೆನಗೆ ಓ ಪೊಳೆವ ಪಗಲ
ಎಳಬಿಸಿಲೆ! ತೇರೊಳ್ ಏಱಿದ ಪೊೞ್ತು! ಇದುವೆ ಕಡೆ, ಕಡೆಯ ನುಡಿ ನುಡಿವೆನ್.
ಓ ಬೆಳಕೆ, ಓ ಪುಣ್ಯಭೂಮಿಯೇ, ಕನ್ನಡವೆ, ಎನ್ನ ತಾಯ್ನಾಡೆ,
ನೆಲನ್ ಅಱಿವ ಬನವಾಸಿ, ತೆಂಗುಗಱಿ ಕೊಡೆಯಿರ್ಪ ಕಡಲುಲಿಯ ಮನೆಯೇ,
ಒಡನಾಡಿ ಪಸುಳೆಗಳೆ, ಕೆಱೆಗಳೆ, ಪೊಸಲ್ಗಳೇ, ಓ ಪಸುರ ಬಯಲೆ,
ಬೀೞ್ಕೊಡಿಂ, ಬೀೞ್ಕೊಡಿಂ, ಎನಗೆ ಜೀವಾನಂದಮ್ ಆಗಿರ್ದರ್ ಎಲ್ಲರ್
ಬೀೞ್ಕೊಡಿಂ, ಪೋಗಿ ಬರ್ಪೆನ್. ಇದೆ ಕಡೆಯ ಮಾತೆನತು, ನಾನ್ ಪೋಗಿ ಬರ್ಪೆನ್.
ಮುಂದಣದು ಕೞಿದವರ ಕೂಟದೊಳ್—ಭಾರತದ ಸಂದ ಸಿಂಹಂಗಳ್,
ಕೌರವಸ್ವಾಮಿಯೊಳ್, ಕರ್ಣನೊಳ್, ಭೀಷ್ಮರೊಳ್, ತಂದೆ ಆ ಗುರುವೊಳ್.

[ಖಡ್ಗದ ಮೇಲೆ ಬೀೞ್ವಿನ್]

ಅರೆಮೇಳಂ ೧

ಅಲೆದೆನತ್ತ, ಅಲೆದೆನಿತ್ತ,
ಅಲೆಯುದಿರ್ದ್ದ ಕಡೆಯುದೆತ್ತ?
ತೊೞಲ್ದೆನಯ್ಯೊ, ಬೞಲ್ದೆನಯ್ಯೊ,
ಕಾಣೆನಯ್ಯೊ ಅವನದೆತ್ತ!
ಏನದು ಸದ್ದು! ಒಹೋ!

ಅರೆಮೇಳಂ ೨

ಒಹೋ!
ನಾವೆ, ನಾವೆ, ನಿಮ್ಮ ಸೋವೆ!

೧

ಬೇಂಟೆ ಇಲ್ಲ?

೨

ಪಡುವಲೆಲ್ಲ,
ಬಳಸಿ, ಬಳಸಿ, ಬಂದೆವೇ!

೧

ಕಂಡುದಿಲ್ಲ?

೨

ಇಲ್ಲ, ಇಲ್ಲ,
ತಡಕಿ, ತಡಕಿ, ನೊಂದೆವೇ!

೧

ಪುಡುಕಿ, ಪುಡುಕಿ, ಮೂಡಲೆಲ್ಲ
ಕಂಡೆವಿಲ್ಲ—ನೊಂದೆವೇ!

ಎಲ್ಲರುಂ

ಆರುವಮ್ ಇಲ್ಲಮೆ ಎಮಗೆ ಪೇೞ್ವಿರ್?
ಕಾಡ ತುಱುಕಾಱನೋ, ಮೀನ್‌ಬಿಡಿವ ತೊೞ್ತಿಯನೋ,
ಮೇರುಗಿರಿಯಿನ್ ಪಾಱಿ ವಿಹರಿಸುವ ದೇವಿಯೋ,
ಆಡಿ ಸಾಗರನೆಡೆಗೆ ಸುೞಿವ ಪೊೞ್ತಿವೆಣ್ದಿರೋ,
ಆರುವಮ್ ಇಲ್ಲಮೆ ರುದ್ರನುರಿಗಣ್ಣನನ್ನನ್
ಎತ್ತಲ್ ಅಲೆವನೊ ಕಂಡು ಪೇೞ್ವಿರ್?
ಅಟ್ಟಿದುದು ಸೆಲೆಯಡಗಿತೀ ಬೇಂಟೆಸೋವು
ನೆಟ್ಟಗಾಗದೆ ಪೋಯ್ತು, ಬೞಿಯ ಮೆಯ್ನೋವು!

ಭಾರ್ಗವಿ

ಹಾ! ಎನ್ನ ಭಾಗ್ಯಮೇ!

೧

ಆದಾರ ಕೂಗು ಪುೞಿಲ ನಡುವೆ ಕೇಳ್ವುದು?

ಭಾರ್ಗವಿ

ಕೆಟ್ಟೆನ್, ಕೆಟ್ಟೆನ್.

೨

ನಮ್ಮ ಕೆೞವಿ, ಭಾಗ್ಯಹೀನೆ, ಭಾರ್ಗವಿ.
ಅವಳ ದುಃಖವಮ್ ಎರ್ದೆಯನ್ ಇಱಿಯುತಿರ್ಕುಮೇ!

ಭಾರ್ಗವಿ

ಕೆಳೆಯಿರಾ, ಕೆಟ್ಟೆನ್, ಮುೞುಗಿದೆನ್, ಪಾೞಾದೆನ್, ಪೋದೆನ್.

ಮೇಳನಾಯಕನ್

ಏನಾಯ್ತು, ತಾಯ್ ?

ಭಾರ್ಗವಿ

ನೋಡಿಪ್, ಅಶ್ವತ್ಥಾಮನ್! ಇದೊ, ಪೊಸತು ಕೊಲೆಪಟ್ಟು
ಈ ಖಡ್ಗಕೊಱೆಯಾಗಿ ಮುದಿರ್ದು ಬಿೞ್ದಿರ್ಪನ್.

ಮೇಳಂ

ಮನೆಗೆ ಮಗುಳ್ವಾಸೆ ಇನ್ನೇನ್!
ಓ ಗುರುವೆ ಕೊಂದೆ ನೀನ್ ಎನ್ನನ್.
ಓ ದುಡುಕಿನಾಳೇ!—ಎರ್ದೆಯೊಡೆದ ಪೆಣ್ಣೇ!

ಭಾರ್ಗವಿ

ಅವನದೇ ನೇರ್ಪು—ಎಮಗೞಲ ಕೂರ್ಪು.

ಮೇಳನಾಯಕನ್

ಆರ ಕಯ್ ಮಾಡಿದುದೊ ಈ ಕೆಟ್ಟ ಕೊಲೆಯನ್ ?

ಭಾರ್ಗವಿ

ಆತನದೆ; ಇದೊ ನೋಡಿಂ, ಸಟ್ಟ ಬಾಳ್ ನೆಲದೊಳ್.

ಮೇಳಂ

ಓ ಎನ್ನ ಬೆಳ್ತನಮೆ, ಗಾಂಪೇ,
ಓ ಕುರುಡೆ, ಬುದ್ಧಿಯೊಳ್ ಸುಣ್ಪೇ,
ಅಱಿಯದಾದೆನ್—ನಿನ್ನನ್ ಅಱಿಯದಾದೆನ್.
ಸಿರಿಯ ಕೆನ್ನೆತ್ತರನ್ ಸುರಿದಯ್!
ನಿನ್ನ ಛಲಮನ್ ತೀರ್ಚಿ ಸರಿದಯ್!
ಕಾಯದಾದೆನ್—ತಡೆದು ಕಾಯದಾದೆನ್.

ಮೇಳನಾಯಕನ್

ಆ ಘೋರಸಂಕಲ್ಪನ್ ಎಲ್ಲಿ? ನೋೞ್ಪಿಂ.

ಭಾರ್ಗವಿ

ಇದು ಕಣ್ಗೆ ನೋಟವೇ? ಬೇಡ. ಮೇಲುಡುಗೆಯಿನ್
ತಲೆಯಿಂದೆ ಕಾಲ್ವರಂ ಮುಸುಕುವೆನ್. ಒಲ್ದವರ್
ಆರ್ ತಾನೆ ನೋಡುವರ್ ಮೂಗಿನೊಳ್, ತಾನೆ ಇಱಿ
ದೇರ್ಗಳೊಳ್, ರಕ್ತಮನ್ ಉಗುಬ್ಬಿದನ್!—ಏನ್ ಮಾಟ್ಪಿನ್!
ಕೆಳೆಯರೊಳಗಾರ್ ನಿನ್ನನ್ ಎತ್ತುವನ್? ಎಲ್ಲಿರ್ಪನ್
ಏಕಲವ್ಯನ್? ಪೊಟ್ಟಿಲ್ತೆ ಇದು ಬರಲ್? ಓ ಕಂದ,
ದೈವಹತ ವೀರ ಅಶ್ವತ್ಥಾಮ! ಎಲ್ಲಿಂದೆ,
ಆವುದೊಂದೆಟ್ಟರದ ಪೆಂಪಿಂದೆ, ಎಲ್ಲಿಗುರುಳ್ದಯ್!
ನಿನ್ನನ್ ಈಗಳ್ ಕಂಡು ಮಱುಗುವರ್ ಪಗೆಗಳುಂ.

ಮೇಳಂ

ಕಡೆಗಾಗುವುದೆ ಆಗಿಪೋಯ್ತು!
ಮುನ್ನೆ ಅಱಿಯಲ್ಬರ್ಕುಮ್ ಆ ಬಗೆಯ ಪೇರುರ್ಕು
ಈ ಬಗೆಯ ಸಾವೊಳೇ ಕೊನೆಗಾಣ್ಗುಮೆಂಬುದು!
ನಿನ್ನೊಳ್ ಇರುಳುಂ ಪೊಗಸುಮ್ ಎಬ್ದಿ ಪೊಗೆ ಗುಡುಗುಗಳಿನ್
ಆ ಬೇವ ಬೆಂಕೆ ಒಳಗೆಸಿತಿರ್ಕುಮೆಂಬುದು!
ಕಡೆಗಾಗುವುದೆ ಆಗಿಪೋಯ್ತು!
ಬಲಿಯಾಯ್ತು ಭಾರತಕೆ ತಂದೆ ಮಕ್ಕಳ ಬರ್ದುಕು,
ಬಲಿಯಾಯ್ತು ಭಾರತಕೆ ನಮ್ಮ ಬರ್ದುಕು.

ಭಾರ್ಗವಿ

ಅಕ್ಕಟಾ, ಅಕ್ಕಟಾ!

ಮೇಳನಾಯಕನ್

ಪೊಗೆಪೊಗೆದು ಪೊತ್ತುಗುಂ ದುಃಖಮಿದು, ಬಲ್ಲೆನ್ ಆನ್.

ಭಾರ್ಗವಿ

ಅಕ್ಕಟಾ, ಅಕ್ಕಟಾ!

ಮೇಳನಾಯಕನ್

ಆರ್ಗೆ ಜೀವಂಬಿಡಿದೆ ಅವರ್ ಅಱಿಯೆ ಕಿಱಿದಬಿಲೆ?

ಭಾರ್ಗವಿ

ಇದು ನಿನಗೆ ಬಗೆಯೆಣಿಕೆ, ಎನಗೆ ಎರ್ದೆಬೆಂಕೆ.

ಮೇಳನಾಯಕನ್

ಅಪ್ಪುದು, ತಾಯ್, ಅಪ್ಪುದು.

ಭಾರ್ಗವಿ

ಓ ಮಗುವೆ, ಓ ಮುದಿಯೆ, ಆರ ನೊಗಕೀಗಳ್,
ಆರ ಕೋಲ್ಗೀಗಳ್, ದುಡಿವ ತೊೞ್ತಾದೆವೋ !

ಮೇಳಂ

ಎಂತೊ, ಅದನ್ ಆರೊ ಬಲ್ಲರ್ !
ಪಗೆಗಳ್ ಆರ್ ಮಱುಕಮನ್ ಬಲ್ಲರ್ !
ದೇವತೆಗಳೇ ಕಾಪರ್ !—ಎಲ್ಲರನ್ ಕಾಪರ್ !

ಭಾರ್ಗವಿ

ದೇವತೆಗಳ್ ಬಲ್ಲದೆಯೆ ಎಮ್ಮ ಬಾೞ್ ಮುಱಿದುದೇ ?

ಮೇಳನಾಯಕನ್

ಅವರ್ ಇಟ್ಟ ಬೇಗೆಯೇ—ತಾಳ್ದುಕೊಳಲ್ ಅರಿಯದು !

ಭಾರ್ಗವಿ

ಇಂತಿದನ್ ಮಾಡುವುದೆ ಕೃಷ್ಣನೊಳ್ ಪ್ರೀತಿಯಿನ್
ಆ ಕೇಡಿಗನ್ ರುದ್ರನ್—ಎಮ್ಮ ಮನೆದೇವರ್ !

ಮೇಳಂ

ನಗುವನ್ ಅಹ, ನಗುವನ್ ಅಹ, ಕೃಷ್ಣನ್ !
ನಗವೇಡ ಎನುತುಂ ಆ ಕೃಷ್ಣನ್
ನಸುನಗುತೆ ಪೇೞ್ವಿನ್ ಈ ಭ್ರಮೆಯ ಕಥೆಯನ್.
ಗಹಗಹಿಸಿ ನಕ್ಕಪರ್
ಕೇಳ್ದು ಭೀಮಾರ್ಜುನರ್.
ಆಹ, ಎನ್ನೊಡೆಯ, ಏನ್ ಅಪಹಾಸ್ಯಮಾದಯ್.

ಭಾರ್ಗವಿ

ನಗುಗೆ, ಪಿರ್ಗುಗೆ, ನಲಿಗೆ, ಅಣಕಿಸುಗೆ, ಇವನಟಿಲ್ಗೆ

ಆ ಪಿರಿಯ ಸಜ್ಜನರ್! ಅವರ್ಗಿನಿದು, ಕಡಿದು ಎನ
ಗೀ ಸಾವು—ತನಗೆಯೋ ಬಲ್ ಸುಖಂ, ಬಲ್ ಸುಖಂ!
ಬಯಸಿದನ್ ಅದಾವುದನ್ ತಾನ್ ಅದನೆ ಕೈಕೊಂಡನ್
ತನ್ನ ಕಯ್ ಸಾವನ್. ಏಕವರ್ ಪಿರ್ಗುವರ್?
ಇವನಮೇಲೇನೆಂದು ಜರ್ಬು ಮಾತಾಡುವರ್?
ದೈವಕ್ಕೆ ಬಿಟ್ಟಿನ್ ಇವನ್—ಅವರಲ್ತು ಕೊಂದವರ್!
ಎಂದಿಂಗಮ್ ಅವರಲ್ತು. ನಗುಗೆ, ಕೃಷ್ಣನ್, ನಗುಗೆ!
ಈಗಳ್ ಅಶ್ವತ್ಥಾಮನ್ ಅವನ ಕಯ್ ಮಿಾಱಿದನ್.
ದುಃಖಕೆನ್ನನ್ ಬಿಟ್ಟು ಸುಖಕೆ ತಾನ್ ನಡೆದನ್.

[ಒಳಗೆ] ಏಕಲವ್ಯನ್

ಹಾ! ಹಾ!

ಮೇಳನಾಯಕನ್

ಏಕಲವ್ಯನ್!

[ಏಕಲವ್ಯನ್, ದೂತನ್]

ಏಕಲವ್ಯನ್

ಅಣ್ಣ, ಅಶ್ವತ್ಥಾಮ, ಗುರುಪುತ್ರ, ಗುರು, ಇಸಿಯ,
ಒರ್ವನ್ ಎನ್ನನ್ ಬಿಟ್ಟು ನೀನಿಂತು ಪೋದೆಯಾ?

ಮೇಳಂ

ಪೋದನ್, ಪೋದನ್.

ಏಕಲವ್ಯನ್

ನಾನೆ ನಿರ್ಭಾಗ್ಯನ್.

ಮೇಳಂ

ಎಲ್ಲರುಂ, ಎಲ್ಲರುಂ.

ಏಕಲವ್ಯನ್

ಏನ್ ದುಡುಕು ಈತನದು!

ಮೇಳಂ

ಬಲ್ದುಡುಕು, ಬಲ್ದುಡುಕು.

ಏಕಲವ್ಯನ್

ಮಗುವೆಲ್ಲಿ? ತಾಯೆ, ಧೈರ್ಯಂಗೊಳ್. ಮಗುವೆಲ್ಲಿ?

ಭಾರ್ಗವಿ

ಬೀಡಿನೊಳಗಾಡುವನ್.

ಏಕಲವ್ಯನ್

ಒರ್ವನೆಯೆ? ಕೊಂಡು ಬಾ
ಪೋಗು, ತಾಯ್, ಬೇಗಂ. ಎತ್ತಿಕೊಂಡುಯ್ದಪರ್
ತಾಯ್ ಬಱಿಯೊಳ್ ಇಲ್ಲದಿರೆ, ಪಗೆಗಳ್ ಆರಾನುಂ ಆ
ಸಿಂಹದೆಳಮಱಿಯನ್. ನಡೆ, ಪೋಗು, ನೀನುಂ. [ಭಾರ್ಗವಿಯುಂ ದೂತನುಂ ಪೋಪರ್
ಸತ್ತರೊಳ್ ಪುರುಡಿಸುವ ಶೂರರ್ ಇರ್ಪರ್ ಕೆಲರ್.

ಮೇಳನಾಯಕನ್

ಅಪ್ಪುದಪ್ಪುದು, ದೊರೆಯೆ. ನಿನ್ನೊಳ್ ಇಟ್ಟನ್ ಕೂಸನ್
ಅಱಿವ ಮುನ್ ಗುರುಪುತ್ರನ್: ಅದಱಂತೆ ಕಾವಯ್.

ಏಕಲವ್ಯನ್

ಎಲ್ಲಿ, ಮೇಲ್‌ಮುಸುಕುದೆಗೆ. ನೋೞ್ಪೆನ್ ಎನ್ನೊಲ್ದನನ್.
ಓ ಘೋರದರ್ಶನಮೆ! ಓ ಕ್ರೂರಕರ್ಮಮೇ!
ಬಿರಿಯುದೆಂತಿರ್ಕ್ಕುಮ್ ಎರ್ದೆ? ಕಣ್ಗಳಿರ, ಒಡೆಯಿರೇ?
ಏನಿರ್ಕ್ಕುಮ್ ಇನ್ ಬಾೞ್ಕೊಳ್? ಕಟ್ಟೊಲ್ಮೆ, ಕಲಿತನಂ,
ಅಡಿದೆಗೆಯದಾಳ್ತನಂ, ಸ್ವಾಮಿಯೊಳ್ ನೆಱೆ ಭಕ್ತಿ,
ಜಗಮನ್ ಅದಿರಿಪ ಶಕ್ತಿ—ಎಲ್ಲಮುಂ ಪೊಂದಿದುವು!
ಪೊಂದಿದುವು! ಸಿನ್ನ ಸಿಡುಕದುವುಮ್ ಒರ್ಚೆಲ್ವೆನಗೆ,
ಓ ವೀರ, ಓ ರುದ್ರನವತಾರ, ಎನ್ನಿಸಿಯ,
ಎನ್ನೊಡೆಯ, ಅಶ್ವತ್ಥಾಮ ಓ ಅಶ್ವತ್ಥಾಮ!
ಎನಗಿಂದೆ ಬೇಂಟೆಯೇ? ಇಂದೆ ವಿಧಿ ಸೆಳೆವುದೇ?—
ಇರ್ದುಮ್ ಏನ್? ವಿಧಿ ಮುಳಿಯೆ, ಆರಿರ್ದುಮ್ ಏನ್ ಮಾಳ್ಪರ್?
ಸಾಲ್ಗುಮ್ ಈ ಬಿಱುಗಾಳ್ಕೆ, ಮುಚ್ಚಿಂ, ಮುಚ್ಚಿಂ.
ಕೆಳೆಯರಿರ, ಇನ್ನೆಮಗೆ ತೆಂಕವಱಿ. ಪೋದಪೆವೆ

ಈ ಮೊಗದೊಳ್ ಅತ್ತಲುಂ? ಗೆಲವಿಲ್ಲ, ಗುರುವಿಲ್ಲ:
ಎಮ್ಮಯ್ಯನ್ ಏನೆನ್ಬನ್! ನೆಟಿಲಂತೆ ಪತ್ತಿರ್ದುರ್
ಸೇವಿಸೆಂದಟ್ಟಿದನೆ! ನಗುತೆ, ಬಾ, ಎನ್ಬನೇ
ಏನುಮಿಲ್ಲದೆ ಸಿಡಿವ ಮುದುಕನ್ ಆ ಮುಂಗೋಪಿ?
ಸುಖದೊಳಂ ನಗದಾತನ್ ಏನನಾಡದೆ ಬಿಡುವನ್?
ತವರೂರೊಳ್ ಎನಗಿಂತು, ನೀನ್ ಸತ್ತು, ಓ ಕೆಳೆಯ,
ಇಲ್ಲಿಯೋ ಪಲ್ಮೊರೆವ ಪಗೆಗಳೇ—ನೆರವಿಲ್ಲ.
ಇನ್ನಿರ್ಕುಮ್ ಒರ್ಕಡನ್—ಕೞಿದರದು. ಮಾಡುವಂ,
ಬನ್ನಿಂ; ಎಱಿತಿಯಿವ್ ಈ ದೇಹಮನ್ ಖಡ್ಗದಿನ್.
ನೋಡಿವ್ ಈ ಖಡ್ಗಮನ್; ಅಭಿಮನ್ಯು ಕೊಟ್ಟುದಿದು.
ವ್ಯೂಹಮುಖದೊಳ್ ಪೊಣರ್ದುರ್, ಸೋಲದೆಯೆ ಒರ್ವನುಂ,
ಪರಸಿ ಅಶ್ವತ್ಥಾಮನ್ ಎಳೆಯಂಗೆ ತನ್ನೊಲ್ದ
ಸುರಿಗೆಯನ್ ಕೊಟ್ಟನ್. ಆತನುಂ ತಲೆವಾಗಿ
ಈ ಖಡ್ಗದುಡುಗೊಱೆಯನ್ ಇತ್ತನ್. ವಿಚಿತ್ರಮ್ ಅದು
ವಿಧಿಯ ಗತಿ—ಅದೆ ಸುರಿಗೆ ಇಱಿದಱಿದನ್ ಅಂದೆ ಅವನ್,
ಇಂದಿವನ್, ಈ ಕೆಟ್ಟ ಖಡ್ಗದಿನ್. ಇದನ್ ಸಮೆದಳ್
ಆವಳೋ ಮಾರಿಯೇ! ಅದು ಯಮನ ಮಾಟಂ.
ಇದುವುಂ, ಇಂತೆಲ್ಲಮುಂ, ದೈವಮ್ ಒಡ್ಡಿದ ಬಲೆಗಳ್
ಆಳ್ಗಳ್ಗೆ. ಬೇಱೆ ಬಗೆವನ್ ಬಗೆಗೆ, ಎನ್ನ ಬಗೆ ಎನಗೆ!

ಮೇಳನಾಯಕನ್

ಆಳ್ ಸಿರಿಗೆ ಕಱುಬುವುದು ದೈವಂ; ಇದು ಪೊಸತಲ್ತು.—
ಇತ್ತಲ್ ಆವನೊ ಮದಿಸಿದಾನೆವೊಲ್ ತೂಗುತ್ತೆ
ಬಂದಪನ್.—ಭೀಮನೋ?

ಏಕಲವ್ಯನ್

ಭೀಮನ್. ಸತ್ತರ್ಗೆ
ಪಾದಪೂಜೆಯನ್ ಎಸಪ ನಯಗಾಜಿನ್. ಬರ್ಕೆ, ಬರ್ಕೆ.

**ಭೀಮನ್**

ಎಲವೆಲವೊ, ನಿಲ್, ನಿಲ್, ಆ ಪೆಣನನ್ ಎತ್ತದಿರ್, ಬಿಱ್ದರ್ಕೆ

**ಏಕಲವ್ಯನ್**

ಏಕುಸಿರ್ ಕಳೆದಪಯ್? ಕೇಳ್ವ ತೊಱ್ತುಗಳ್ ಇಲ್ಲ, ಇಲ್ಲಿ.

**ಭೀಮನ್**

ಕೇಳೆಲವೊ, ನಾಡಾಡಿ. ನಿದ್ರೆಯೊಳೆ ಸೈನ್ಯಮನ್ ಕೊಲಬಗೆದ
ಘಾತುಕನ್, ರಾಕ್ಷಸನ್—

**ಏಕಲವ್ಯನ್**

ಅವನೊ ರಾಕ್ಷಸಿಯಾಳ್ದನ್? ರಕ್ತಂ ಪೀರ್ದನ್?

**ಭೀಮನ್**

ಈ ಭುಜದ ಗದೆಯ ಘಾಯಕೆ ಬೆದಱಿ, ಪೆಣ್ಣಂತೆ, ಮೂಲೆಯೊಳ್
ಸತ್ತವನ್, ಯುದ್ಧಧರ್ಮಮನ್ ಅಱಿಯನ್, ಆಚಾರ್ಯಸುತನೆಂಬನ್!

**ಮೇಳನಾಯಕನ್**

ಓ, ಭೀಮ, ಧರ್ಮಮನ್ ಪೆಸರೆತ್ತಿ ಮಾಡದಿರ್ ಅಧರ್ಮಮನ್.

**ಭೀಮನ್**

ನಮ್ಮ ದೇವರ್ ಬಂದು ಕಾಯದಿರೆ, ಅವನ ಕಯ್ ತಡೆಯದಿರೆ,
ಪಶುಗಳೊಳ್ ತೋಱಿದಿರೆ, ಅವನ್ ಈಗಳ್ ಏನಾದನ್, ಅದುವೆ ನಾಮ್—
ನಾಯ್‌ಪಾಲ್ ಶವಂಗಳ್! ನಾಯ್ಗಳ್ಗೆ, ನರಿಗಳ್ಗೆ, ಪರ್ದುಗಳ್ಗೆ
ಬಿರ್ದಿಕ್ಕಿ ಬಿಸುಡಿಪೆನ್. ಅದೆ ಅವನ್ಗೆ ತಕ್ಕ ಸಂಸ್ಕಾರಂ—
ಬಿಲ್ಲೆಱೆದದಾರನೋ ಬೆದಱಿಪುದು? ಗದೆಯ ಸಱಿ ಕಾಣಾ?

**ಏಕಲವ್ಯನ್**

ಅದೇನದೇನ್, ಆಡಾಡು, ಮತ್ತೊರ್ಮೆ ಕೇಳ್ದಪೆನ್. ಪರ್ದುಗಳ್ಗಿಡುವಾ?
ಧರ್ಮಮನೆ ಅಱಿಯನೇ ಆಚಾರ್ಯಸುತನಾಗಿ! ಧರ್ಮಮನ್ ಬಲ್ಲಯ್?
ಆಚಾರ್ಯರನ್ ಮಱೆತೆಯೆ ಇನ್ನುಂ? ನಾವೊಡನೆ ಕಲ್ತುದನ್ ನೆನೆವಾ?
ಪೆರ್ಕುಡಿಯ ಮಕ್ಕಳಿರ್ ನೀವೆ ಇಂತಾಡುವೊಡೆ, ಕೀಱ್ಗಳ್ ಏನಪ್ಪರ್.
ಪೋ ಪೋಗು. ಅಬ್ಬರಿಸಿ, ಏಱಿಸದಿರ್ ಅಶ್ವತ್ಥಾಮನನ್.

ಭೀಮನ್

ಏನ್ ಬಿಂಕಂ, ಕಾಡ ಬಿಲ್ಗಾಱನದು!

ಏಕಲವ್ಯನ್

ಗದೆ ಬೀಸುವಂತಲ್ತು, ಭೀಮ,
ಬಿಲ್ವಿಸನ್. ನುಡಿಯಿಸಲ್ ಬಲ್ಲಂಗೆ ಬಿಲ್ಲೊಂದು, ಮೇಣ್ ಬೀಣೆಯೊಂದು.
ನಿನ್ನ ತಮ್ಮಂಗಾಗಿ ಗುರುಗೆ ಬೆರಲನ್ ಕೊಟ್ಟೆನ್. ಆದೊಡಂ, ನೋಡು,
ತೋಱುವೆನ್ ಬಿಲ್ಲೊಂದು ಮಾಟಮನ್.

ಭೀಮನ್

ನಾಲಗೆಯೊ, ನಿನ್ನ ಬಿಲ್? ಸೊರ್ಕ್ಕೆ!

ಏಕಲವ್ಯನ್

ಧರ್ಮಮಿರ್ದ್ದೆಡೆ ಸೊರ್ಕ್ಕೆ!

ಭೀಮನ್

ಧರ್ಮಮೋ ಎನ್ನ ಕೊಲೆಗಾಱಂಗೆ ತಡೆದು
ಮೆಯ್ಗಾಪು ನಿಲ್ವುದಿದು?

ಏಕಲವ್ಯನ್

ನಿನ್ನ ಕೊಲೆಗಾಱನ್! ಕೊಂದುಮ್ ಎಂತಿರ್ಪೆಯ್?

ಭೀಮನ್

ದೇವತೆಯ ದಯೆಯಿನ್. ಇಲ್ಲದೊಡೆ, ನಾನ್ ಸತ್ತ ಪೆಣಮೆ.

ಏಕಲವ್ಯನ್

ಕಾದ ದೇವತೆಗಳ್ಗೆ ಕಡೆಗಣಿಸಿ ನಡೆಯದಿರ್.

ಭೀಮನ್

ನಾನೆ ದೇವತೆಗಳ್ಗೆ ಮೆಯ್ಮಱೆತು ನಡೆವವನ್?

ಏಕಲವ್ಯನ್

ಮತ್ತೆಂತು? ಉತ್ತರಕ್ರಿಯೆಗಳನ್ ತಡೆವೊಡೆ?

ಭೀಮನ್

ಎಮಗವನ್ ಕಡುವೈರಿ—ಪಶುಗಳನ್, ಪೆಣ್ಡಿರನ್,
ಮಕ್ಕಳನ್ ತಱಿದವನ್—ಪಡೆ ಶಪಿಸುತಿರ್ಪವನ್.

ಏಕಲವ್ಯನ್

ಇದೊ ನೋಡು, ನಿನ್ನಿದಿರೆ ಕ್ರಿಯೆಗಳನ್ ಮಾಡುವೆನ್.

ಭೀಮನ್

ಇದೊ ನೋಡು, ನಿನ್ನಿದಿರೆ ಪರ್ದುಗಳ್ಗೊಡುವೆನ್.

ಏಕಲವ್ಯನ್

ಆಗದಯ್, ಆಗದಯ್ ನಿನ್ನಿಂದೆ, ನಾನ್ ಇರಲ್.

ಭೀಮನ್

ನೀನ್ ತಡೆಯೆ, ಒಂದಲ್ತು, ಎರಡು ಶವಮ್ ಅಕ್ಕುಂ.

ಏಕಲವ್ಯನ್

ನಿಜಂ ನುಡಿದೆ—ನಿನಗೆ ಬಾೞಿನ್ ಬೇಡವಾಯ್ತಕ್ಕುಂ.

ಭೀಮನ್

ಬಡಪಾರ್ವರೊಳ್ ಬೆಳೆದು ಬಾಯ್ ಬಡಿವುದನ್ ಕಲ್ತೆ.

ಏಕಲವ್ಯನ್

ನಾನ್ ಕಲ್ತೆನ್ ಆತ್ಮಮನ್.

ಭೀಮನ್

ಆತ್ಮಮನ್! ಅನಾರ್ಯ!

ಏಕಲವ್ಯನ್

ಅನಾರ್ಯನಾರ್, ಆರ್ಯನಾರ್? ನೋೞ್ಪಂ.

[ಯುದ್ಧಂ, ಭೀಮನನ್ ತಱುಬಿಕೊಂಡು ಪೋಪನ್

ಮೇಳಂ

೧

ಪೊತ್ತಿದುವೆ, ಪೊತ್ತಿದುವೆ ನಿಷ್ಠುರದ ನುಡಿಗಳ್!
ಮೊತ್ತಮೊದಲ್ ಇನಿಯವೇ, ತುದಿ ನಂಜು ನುಡಿಗಳ್!
ಒಂದು ನುಡಿ, ಒಂದು ಕಿಡಿ—ಕೊನೆಗೆ ಕಾಟ್ಕಿಚ್ಚುಱ:
ಬೀರರ್ ಇರ್ವರ್ ತೀಡೆ, ಬಿದಿರ ಮೆಳೆಗಿಚ್ಚುಱ.
ಮಾಡಿದವನ್ ಆರ್ ಮೊದಲ್ ಯುದ್ಧಮನ್, ಕಾಣೆನ್,
ಕೂಡಿರ್ಪರೊಳ್ ಕಲಹಮ್ ಒಡ್ಡಿದನ್, ಕಾಣೆನ್.

ಬೇಱಿತೆ ಕಾರ್ಯಂ ತಗದೆ ಸಾಹಸಿಗನಾಳ್ಗೆ?
ಬೇಱಿತೆ ಭೂಷಣಮ್ ಇರದೆ ಮಾನವನ ತೋಳ್ಗೆ?
ಓ ಪೊಲ್ಲ ಯುದ್ಧವೇ,
ಎಂದು ನಿಲ್ವೆಯ್!
ಓ ತಾಯೆ ಶಾಂತಿಯೇ
ಎಂದು ಗೆಲ್ವೆಯ್!

೨

ಪಲ್ ಮಸೆದು, ಕಲ್ ಮಸೆದು, ಬಾಳ್ ಮಸೆದು, ಪೊಂಚಿ,
ಬಗೆ ಮಸಗಿ, ಬಾಯ್ ಮಸಗಿ, ಕಯ್ ಮಸಗಿ, ಮುಂಚಿ,
ಪಡೆನೆರಪಿ, ಪಗೆಯುರಿಪಿ, ಕೊಲ್ವ ಮುನ್ ಪಿಡಿದು,
ಪೇರಾಟಿಕಿಕ್ಕರೇ ನರಕದೊಳ್ ಗಿಡಿದು,
ಯುದ್ಧಮನ್ ನೆಲಕೆ ಬಿತ್ತಿದ ಪರಮ ಪಾಪಿಯನ್!
ಸರ್ಪದುರಿ ಪಲ್ಗಳನ್ ಬಿತ್ತಿದಾ ಪಾಪಿಯನ್!
ಆ ಪಾಪಿ ಕಿಡಿಸಿದನ್ ಚೆಲ್ವಾದ ಬಾಟಿಕ್ಕೆಯನ್,
ಆಟಪಾಟಂಗಳನ್, ಪಲ ಸಿರಿಯ ಮಾಟಿಕ್ಕೆಯನ್;
ಓ ನಲವೆ, ಪೆಣ್ಣೊಲವೆ,
ನೀಮ್ ಪಾಱಿ ಪೋದಿರ್!
ಓ ಕೊಟಿಲೆ, ತಣ್ಣೆಟಿಲೆ,
ನೀಮ್ ದೂರಮಾದಿರ್!

೩

ಏಗಱಿಗೆ ಪುಟ್ಟಿದಳೊ ಅಗ್ನಿಯೊಳ್ ನಾರಿ,
ಕೃಷ್ಣೆಯವಳ್, ಆ ಚಂಡಿ, ಕೌರವರ ಮಾರಿ!
ಭಾರತದ ಸುಖದ ಕುಡಿ ಸುಟ್ಟು ಕರಿಕಾಯ್ತು!
ಆ ಬೆಂಕೆ ದ್ರೌಪದಿಗೆ ತನಗೆ ಸುಖಮಾಯ್ತು!
ಜಾಱಿದೊಡೆ ಕೌರವನ್ ತೊಟ್ಟಿತ್ತರೊಳ್ ನಕ್ಕಳ್—
ಆಗಱಿಗೆ ದುಃಖಮನ್ ಪೊಕ್ಕಳ್—
ನಕ್ಕವಳನ್ ಎಱೆತರಿಸಿ, ಕಿಟ್ಟು ಸಿರಿಮುಡಿಯನ್,

ಉರಿವೆಣ್ಣ ಮುಡಿಯನ್,
ತೊಟ್ಟಿ, ಬಾ, ಏಱೆಂದು ತೋಱಿದನ್ ತೊಡೆಯನ್;
[ಏಕಲವ್ಯನನ್ ತಱುಬಿಕೊಂಡು ಭೀಮನ್]
ಆ ತೊಡೆಯನ್ ಎಲೆ ಭೀಮ, ತೋಱಿದಾ ತೊಡೆಯನ್
ಮುಱಿದೆ ನೀನ್, ನುಡಿದಂತೆ ಮುಱಿದೆ ನೀನ್ ತೊಡೆಯನ್—
ಒದೆದೆ ಪೊನ್ ಮುಡಿಯನ್,
ಒದೆದೆ ಕೌರವನ ಸಿರಿಮುಡಿಯನ್.
ಮುಱಿದೊದೆದು, ಪುಡಿಯೊಳಗೆ ಪೊರಳ್ವ ನರಳ್ವೊಡೆಯನನ್,
ಪೊರೆದಾಳ್ದ ಕಡುನಲ್ಮೆಯೊಡೆಯನನ್
ಕಂಡು, ಕ್ರೋಧಂ ಪೊತ್ತಿ, ಕಿಡಿಯಾದನ್ ಈತನ್.
ಮರುಳ್ಗೊಂಡು ಕೊಲೆಗೆಯ್ದನ್ ಈತನ್.
ಪೇಸುತ್ತೆ ತನ್ನನೇ ಕೊಲೆಗೆಯ್ದನ್ ಈತನ್.
ಮಚ್ಚರಿಸಿ ಶವದಮೇಲ್ ತೀರಿಸಲ್ ಬಂದಯ್,
ಇದೊ ಮತ್ತೆ ಯುದ್ಧಮನ್ ತಂದಯ್.
ಕರ್ಮಮ್ ಈ ಪರಿ ಮಱಿಗೆ ಮಱಿ ಇಕ್ಕುತಿರ್ಕುಂ.
ಕ್ಷಮೆಯಿಂದೆ ಸಮೆಯದಿರೆ ಮಱುಕೊಳಿಸುತಿರ್ಕುಂ.
ಓ, ಭೀಮ, ಓ, ಏಕಲವ್ಯಾ,
ಸಾಲದೇ ರಕ್ತದೊಳ್ ಸ್ನಾನಂ?
ಸಾಲದೇ ಈ ರಕ್ತಪಾನಂ?
[ಭಾರ್ಗವಿ, ರುದ್ರಶಕ್ತಿ, ದೂತನ್]
ನೋಡಿರೇ, ನೋಡಿರೇ, ನಿಮ್ಮ ಶೌರ್ಯದ ಫಲಂ!
ಗಂಡಾಗಿ ಪೆತ್ತುದಱ ನಿಮ್ಮ ವೀರ್ಯದ ಫಲಂ!
ಮಕ್ಕಳಿಲ್ಲದ ತಾಯ್ವಿರ್! ತಂದೆಯಿಲ್ಲದ ಮಕ್ಕಳ್!
ಮೃತ್ಯುದೇವತೆಯೊರ್ವಳ್ ಆನಂದಿಸಲ್ ತಕ್ಕಳ್!
ಕೇಳರೇ, ಕೇಳರೇ, ನಾನಾರ್ಗೆ ಪೇೞ್ವೆನ್!
ಏಕಲವ್ಯನ್ ಬೀೞೆ, ನಾನೆಂತು ಬಾೞ್ವೆನ್!
ಈ ದುಷ್ಟ ಭೀಮನನ್ ಕೆಡಪುವೆನ್, ಪೂೞ್ವೆನ್!

[ಕೃಷ್ಣನ್]

ಓ ಕೃಷ್ಣ, ಓ ಕೃಷ್ಣ, ಒಳ್ಪೊಟ್ತಿನೊಳ್, ಬಂದೆ.
ಶಾಂತಿಯನ್ ಕಲಿಸು ಬಾ, ನಿಲಿಸು ಬಾ, ತಂದೆ.
ಭಾರತದೆ ಶಾಂತಿಯನ್ ನಿಲಿಸು ಬಾ, ಮುಂದೆ!

ಕೃಷ್ಣನ್

ಏನ್ ಇದಣ್ಣಂದಿರ್? ಓ, ಇದಶ್ವತ್ಥಾಮನ್!
ಏಕಲವ್ಯಾ, ತಡಂ ಮಾಡಿದಯ್.

ಏಕಲವ್ಯನ್

ದೈವೇಚ್ಛೆ!

ಕೃಷ್ಣನ್

ಏನ್, ಭೀಮ? ನೀನ್ ಬಂದುದನ್ ಕಂಡು ಬಂದೆನ್.
ಬೀಡಿಂಗೆ ಕೇಳ್ವುದೇನಿದು ಕೂಗು!

ಭೀಮನ್

ನೋಡು, ಕೃಷ್ಣ,
ಈ ಬೇಡಕುನ್ನಿ ಏನ್ ಬಗುಳ್ದಪನ್.

ಕೃಷ್ಣನ್

ತೆಗೆ, ತೆಗೆ,
ಏಕಲವ್ಯನ್ ಶೂರನ್, ಗುರುಭಕ್ತನ್, ಧಾರ್ಮಿಕನ್.
ನಿನಗವನೊಳ್ ಏನ್ ಕಲಹಂ?

ಭೀಮನ್

ಈ ಶವಮನ್ ಈಯನ್,
ಎನ್ನಾಜ್ಞೆಯನ್ ಮೀಱಿ, ಸಂಸ್ಕಾರಮ್ ಎಸಗುವನ್.

ಕೃಷ್ಣನ್

ಕೆಳೆಯನೆಂಬನ್ ನುಡಿದು ಕೆಳೆಯಲ್ಲದೊರ್ಮಾತನ್
ಕೆಳೆಯನಿರಲಕ್ಕುಮೋ?

ಭೀಮನ್

ಮುರುಳಲ್ತು ನಾನ್; ನುಡಿಯು.

ನಿನ್ನಿಂದೆ ಕೆಳೆಯನ್ ಆರ್?

ಕೃಷ್ಣನ್

ಆ ರುದ್ರನಾ ಪರಮ
ನಾಜ್ಞೆಯಿನ್ ಪೇೞ್ದಪೆನ್. ಹೃದಯಮನ್ ಕಲ್ಮಾಡಿ
ತಡೆಯದಿರು ಸತ್ತಂಗೆ ನಡೆವ ಸಂಸ್ಕಾರಮನ್.
ದ್ವೇಷಮ್ ಎನಿತಿರ್ದೊಡಂ, ತುೞಿಯದಿರು ಧರ್ಮಮನ್.
ದ್ವೇಷಿಸಿದನ್ ಎನ್ನನ್ ಇವನ್—ಎನಗೆ ಬದ್ಧದ್ವೇಷಿ—
ಆದೊಡಂ ಗೌರವಂದೋಱುವೆನ್, ಕಲಿಗಳೊಳ್
ಕಲಿ ಎಂದು ಸಾಱುವೆನ್. ಅಭಿಮನ್ಯು ಅವನ್ ಒರ್ವನ್,
ಇವನ್ ಒರ್ವನ್–ಬೆಂಕೆಗಳ್–ಸಿಡಿಲ ಮಱಿಗಳ್–ರುದ್ರ
ನಂಶಂಗಳ್. ಇಂತಪ್ಪ ವೀರನನ್ ಕೆಡೆನುಡಿದು
ಲಜ್ಜೆಗೆಟ್ಟಿಱಿವುದು ತರಮೆ ನಿನ್ನ ಪೆರ್ಮೆಯ ಕಲಿಗೆ?
ಓ ಭೀಮ, ದೇವತೆಯ ಕಟ್ಟಳೆಗಳ್–ಇವನಲ್ತು—
ನೀನ್ ಮೀಱುತಿರ್ಪುದು. ಕಲಿ ಸಾಯೆ, ಪಗೆಗಳುಂ
ಪೊಗೞ್ವುದದು ಶೀಲಂ—ನೋಯಿಸುವುದಲ್ತು.

ಭೀಮನ್

ಎಮ್ಮೆಲ್ಲರಾ ದೈವಂ ಆ ರುದ್ರನ್ ಅವನೆ ಕಯ್ಬಿಟ್ಟನ್.

ಕೃಷ್ಣನ್

ಬಿಟ್ಟನೋ, ತೊಟ್ಟನೋ, ನಾಮೆಂತು ಕಂಡಪೆವು
ಆ ರುದ್ರಹೃದಯಮನ್? ಪರಿಶುದ್ಧನನ್ ಮಾಡಿ
ಆತ್ಮಮನ್ ಸೆಳೆದನೆನ್ಬೆನ್.

ಭೀಮನ್

ಪಗೆಯ ಕಡೆ ವಹಿಸಿ,
ನೀನೇ ಇದಿರ್ಚುವುದೆ ಎನ್ನನ್? ಓ ಕೃಷ್ಣ,
ದ್ರೌಪದಿಯ ದುಃಖಮನ್ ನೀನ್ ಬಲ್ಲೆ.

ಕೃಷ್ಣನ್

ದುಃಖಮುಂ

ಕ್ರೋಧಮುಮಂ ಮಾಡುವುದು ಸಯ್ತಲ್ತು: ಇದೊ, ಸಾಕ್ಷಿ.

ಭೀಮನ್

ಅದು ಪೋಕೆ: ಕೊಂಡುಯ್ವೆನ್ ಆ ಶಿರೋರತ್ನಮನ್.

ಕೃಷ್ಣನ್

ಚಂಡಿಸದಿರಯ್, ಭೀಮ. ಪುತ್ರರತ್ನಂಗಳ್ಗೆ
ಈ ರತ್ನಮ್ ಒರ್ಪಡಿಯೆ?

ಭೀಮನ್

ಇಂತಪ್ಪ ನೀಚರನ್ ಅ
ದೆಂತು ಸೈರಿಸುವುದೋ! ತುೞಿವುದುಂ ತಪ್ಪಲ್ತು.

ಕೃಷ್ಣನ್

ಪೆಣ್ಣ ಕಣ್ಣೀರ್ ಕಂಡು ನೀನ್ ಇಂತು ಮೊರೆದಪಯ್.
ಈಗಳ್ಗೆ ಸೈರಿಸು—ಎನ್ನೊಡನೆ ಬಾ, ನಿಮಗೆ
ತೋಱುವೆನ್ ಶ್ರೇಯಮನ್.

ಭೀಮನ್

ನೀನ್ ಇಂದು ಭೀಮನನ್
ಪೇಡಿಯನ್ ಮಾಡುವಯ್. ಇಂತಾಗೆ, ಜಯಮ್ ಎಲ್ಲಿ ನಮಗೆ?

ಕೃಷ್ಣನ್

ಕೆಳೆಯಂಗೆ ಸೋಲ್ವುದೆ ಜಯಂ; ಕ್ಷಮೆಯೆ ತಾನ್ ಜಯಂ;
ಕ್ರೋಧಮನ್ ತುೞಿದಿಟ್ಟು, ಬಲ್ಪಿಡಿದು ಧರ್ಮಮನ್,
ಬಗೆಯೊಡನೆ ಪೋರಾಡುವುದೆ ಜಯಂ. ಬಾ, ಭೀಮ,
ಸರ್ವರುಂ ಪೊಗೞುತಿರೆ, ಸತ್ಕರಿಸುವಂ, ಬಾರ,
ಪೂಜ್ಯನ್ ಅಶ್ವತ್ಥಾಮನನ್.

ಭೀಮನ್

ಸತ್ತನೊಳ್ ಇದೇನ್ ಭಕ್ತಿ?
ನಿನ್ನ ಬಗೆಯನೆ ಅಱಿಯೆನ್ ಇನ್ನುಂ, ಕೃಷ್ಣ.

ಕೃಷ್ಣನ್

ಓ ಮಿತ್ರ, ನಾನುಮ್ ಇಂತಾಗೆನೇ ಒಂದು ದಿನಂ?

ಭೀಮನ್

ಒಳ್ಳಿತಿದು ನಿನ್ನೆಸಕಮ್, ಎನತಲ್ತು.

ಕೃಷ್ಣನ್

ಧರ್ಮಮ್ ಅಕ್ಕೆ!
ಆರದಾದೊಡಮೇನೊ?

ಭೀಮನ್

ನಿನ್ನೊಡನೆ ಪೋರಾಡೆನ್.
ನಿನ್ನಿಷ್ಟದಂತಕ್ಕೆ. ನಾನ್ ಕ್ಷಮಿಸಲಾಱೆನ್ ಈ
ಘೋರನನ್. ಬಾೞ್ತೊಳ್ ಎಂತಂತೆಯೇ ಸಾವಿನೊಳಂ
ಎನಗೆ ಪಗೆ ಇವನೊಳ್. [ಪೋಪನ್

ಮೇಳನಾಯಕನ್

ಓ ಕೃಷ್ಣ, ಧರ್ಮದೇವತೆಯೆ ನೀನ್! ಅಱಿಯದರ್
ದೂಱುವರ್. ನಾಮಿಂದು ಸತ್ಯಮನ್ ಕಂಡೊಮ್.

ಕೃಷ್ಣನ್

ಪಿಂದೆ ಪಗೆ, ಮುಂದೆ ಕೆಳೆ. ನಿಮ್ಮೊಡನೆ ಕೂಡುವೆನೆ
ಸಂಸ್ಕಾರಕರ್ಮದೊಳ್? ವೀರಂಗೆ, ಧೀರಂಗೆ,
ರುದ್ರಾವತಾರಂಗೆ ಸೇವೆಯನ್ ಸಲಿಸುವಂ.

ಏಕಲವ್ಯನ್

ಓ ಕೃಷ್ಣ, ಸ್ತೋತ್ರಾರ್ಹಮ್ ಈ ನಿನ್ನ ಸೌಜನ್ಯಮ್,
ನಿನ್ನ ಧರ್ಮಪ್ರೀತಿ. ಆ ಪಶುವಿನಂತಲ್ತು,
ಆ ಮತ್ತನ್ ಆ ದೈತ್ಯನಂತಲ್ತು ನಿನ್ನ ನಡೆ,
ನಿನ್ನ ನುಡಿ. ಕರುಣದಿನ್ ಬಿೞ್ದ ಪಗೆಯನ್ ಕಾದೆ,
ನಿನ್ನವರಿನ್. ಆದೊಡಂ ಪ್ರೇತಕರ್ಮಂಗಳೊಳ್,
ಓ ವಾಸುದೇವಾ—ನಿನ್ನನ್ ಎಮ್ಮೊಳ್ ಕೂಡೆ
ಅಳ್ಕುವೆನ್. ಪ್ರಿಯಮೊ ಅದು ಅಪ್ರಿಯಮೊ ಕೆಳೆಯಂಗೆ
ಅಱಿಯೆನ್ ಆನ್. ಈ ಒಂದಱೊಳ್ ಕ್ಷಮಿಸು, ಬೇಡುವೆನ್.

ಕೃಷ್ಣನ್

ನಿಮ್ಮ ಸಂತೋಷಂ—ಎನ್ನಿಷ್ಟಮಲ್ತಿಲ್ಲಿ.
ನಿನ್ನ ತೀರ್ಪಿಂಗಿದೋ ತಲೆವಾಗಿ ಪೋಗುವೆನ್.
ತಂದೆಯನ್ ವಿಾಱಿಸುಗೆ, ಈ ಕಂದನ್. ಭಾರ್ಗವಿ, ತಾಳ್ಮೆ ತಾಯ್,
ಕಲಿಗಳನ್ ಬಳೆಯಿಪುದೆ ನಿನ್ನ ಪಾಲ್ ನಲಿವು. [ಪೋಪನ್

[ಭಾರ್ಗವಿ ತಲೆಯನ್ ಬಾಗಿ ಮಗುವನ್ ಕರೆದುಕೊಳ್ವಳ್]

ಏಕಲವ್ಯನ್

ಏಱಿವಿನ್, ಪೊಱತ್ತೀಱಿತಾಗಳೇ, ಏಱಿಂ.
ಎಡೆಯೂಯ್ದು ಕಲ್ಲಱಿಗೆ ಭೂವಿಯನ್ ಕೀೞಿಂ.
ಗಂಗೆಗೊರ್ವನ್ ಪರಿಗೆ—ಅಗ್ನಿಗಿನ್ನೊರ್ವನ್.
ಆಯುಧಮನ್ ಎಲ್ಲಮನ್ ಬೀಡಿಂದೆ ತನ್ನಿಂ.
ಬಾ, ತಾಯೆ; ಬಾ, ಮಗುವೆ; ಕೆಳೆಯರಿರ, ಬನ್ನಿಂ.
ಮೆಯ್ಯಿಟ್ಟು, ಕುರುಳಿಟ್ಟು ಭಕ್ತಿಯನ್ ತೋರ್ಪಂ.
ಇನ್ನುಮ್ ಆಹಾ! ಇವನ್ ರಕ್ತಮನೆ ಸೋರ್ವನ್.
ವೀರರೊಳ್ ವೀರಂಗೆ, ರುದ್ರಾವತಾರಂಗೆ,
ರುದ್ರನೊಳ್ ಪೋರ್ದಂಗೆ, ರುದ್ರನೊಳೆ ಸೇರ್ದಂಗೆ,
ಸೇವೆಯನ್ ಮಾಳ್ಪಿಂ,
ಪೂಜೆಯನ್ ಮಾಳ್ಪಿಂ.

ಮೇಳಂ

ಎಮ್ಮ ಕಾಡುಗಳೆಡೆಯ ಪಟ್ಟಿಯನ್ ಮುಟ್ಟಿ,
ಎಮ್ಮ ಬೆಟ್ಟದಮೇಲೆ ಕೋಯಿಲನ್ ಕಟ್ಟಿ,
ಸೇವೆಯನ್ ಮಾಳ್ಪಿಂ,
ಜಾತ್ರೆಯನ್ ಮಾಳ್ಪಿಂ.

ಎಲ್ಲರುಂ

ಜಯ್, ಅಶ್ವತ್ಥಾಮನ್!
ಜಯ್, ಅಶ್ವತ್ಥಾಮನ್!

ಮೇಳನಾಯಕನ್

ಇಂದೇನೊ, ಮುಂದೇನೊ, ಮುನ್ನೆ ಆಳ್ ಕಾಣನ್.
ಬಂದುದನೆ ಕೊಂಡುಂಡು ತಾಳ್ದವನೆ ಜಾಣನ್.
ರುದ್ರನ್ ಒಲ್ದೊಡೆ ಉೞಿವು,
ಒಲ್ಲದೊಡೆ ಒಡನೞಿವು;
ತೞ್ಗಿ ನಡೆದೊಡೆ ರುದ್ರನ್ ಒಲ್ಲದೆಯೆ ಮಾಣನ್,
ಅಳವೞಿತು ನಡೆಯೆ ಶಿವನ್ ಒಲ್ಲದೆಯೆ ಮಾಣನ್. ೧೦೦೦



# ಶಬ್ದಕೋಶ

[ಸಂಖ್ಯೆಗಳು ಮೂಲದ ಪಂಕ್ತಿಗಳನ್ನು ಸೂಚಿಸುತ್ತವೆ]

### ಅ

ಅಂಜುಕುಳಿ, ೩೯೯, ಹೆದರುವವನು, ಹೇಡಿ.
ಅಡಕಂ, ೪೭೪, ಹದುಗಿರುವುದು, ಸೂಕ್ಷ್ಮವರಿತು ಸುಮ್ಮನಿರುವುದು.
ಅಣಕಂ, ೩೩೯, ಕಾಟ.
ಅಣುಗ, ೪೩೭, ಮುದ್ದಿನ ಮಗ.
ಅಂದುತೊಟ್ಟು, ೫೨೫, ಅಂದು ಮೊದಲುಗೊಂಡು.
ಅನ್ನರ್, ೨೭೫, ಅಂಥವರು.
ಅರಿಯ, ೬೫, ೩೯೬, ಅಸಾಧ್ಯನಾದ, ಗೆಲ್ಲುವುದಕ್ಕೆ ಕಷ್ಟವಾದ (ಅಂದು—ಎಂಬುದರಿಂದ).
ಅಱಿಯದು, ೭೪೬, ಅರಿದಾದದ್ದು, ದುಸ್ಸಹವಾದದ್ದು.
ಅಱಿಗುಲಿ, ೨, ಧರ್ಮಘಾತಕ, ದುಷ್ಟ.
ಅಱಿಯಮೆ, ೪೫೪, ಅಜ್ಞಾನ.
ಅಱ್, ೫೩೩, ಅಡಗು.
ಅಳವು, ೧೦೦೦, ಪ್ರಮಾಣ, ಶಕ್ತಿ, ಮಿತಿ.
ಅಳಿಱು, ೩೩೫, ಕೆಸರು.
ಅೞಲ್, ೧೩೨, ದುಃಖ.
ಅೞ್ಕಱ್, ೪೬೧, ಪ್ರೀತಿ.
ಅೞಿ, ೨೨೯, ಕೆಟ್ಟ; ೩೯೭, ಸಾಯಿ.
ಅೞ್ದು, ೨೪೧, ಮುಳುಗು.

### ಆ

ಆಗು, ೧೯೯, ಮುಂದೆ ಆಗತಕ್ಕದ್ದು, ಗತಿ.
ಆರ್, ೫೩೩, ಕೂಗು, ಅಬ್ಬರಿಸು.
ಆರಯ್, ೫, ವಿಚಾರಮಾಡು.
ಆಳ್, ೧೧೦, ಮನುಷ್ಯ; ೪೯೫, ವೀರ.
ಆಳ್ತನಂ, ೭೮೩, ಪೌರುಷ.
ಆಳ್ದನ್, ೨೫, ಆಳಿದ ಒಡೆಯ.

### ಇ

ಇಡು, ೧೩೪, ಎಸೆ.
ಇದಿರ್ಚು, ೯೩೮, ಎದುರಿಸು, ವಿರೋಧಿಸು.

### ಈ

ಈಂಟು, ೨೭೨, ಕುಡಿ.
ಈೞ್, ೬೦೪, ಎಳೆದುಹಾಕು, ಸೆಳೆ.

### ಉ

ಉರ್ಕು, ೪೫೫, ಉಕ್ಕು, ಕೆಚ್ಚು, ಅಭಿಮಾನ, ಅಹಂಕಾರ.
ಉಗ್ರ ಕನ್ನಿಕೆಯರ್, ೬೫೧, ಶಿಕ್ಷೆಕೊಡುವ ಕ್ರೂರದೇವತೆಗಳು (Furies).
ಉಡುಗೊಱೆ, ೮೦೫, ಮೆಚ್ಚು, ಬಹುಮಾನ.
ಉಬ್ಬಸ, ೨೩೦, ಸಂಕಟ.

### ಊ

ಊಡು, ೮೧, ಕುಡಿಸು; ೮೪೫, ಉಣಿಸು.

### ಎ

ಎಡರ್, ೧೮೨, ಕಷ್ಟ, ಕೇಡು.
ಎಡೆವೊಕ್ಕು, ೫೮೦, ನಡುವೆ ನುಗ್ಗಿ.
ಎರೆ, ೧೦೩, ಪ್ರಾರ್ಥಿಸು; ೬೪೮, ಆಹಾರ.
ಎಱಕೆ, ೪೮೦, ರೆಕ್ಕೆ.
ಎಳಮೆ, ೩೬೧
ಎಳವೆ, ೬೦೦ } ಎಳೆಯ ವಯಸ್ಸು.
ಎಸಕಂ, ೯೫೬, ಕೆಲಸ.
ಎೞ್ಬಟ್ಟು, ೪೫, ಓಡಿಸಿಕೊಂಡು ಹೋಗು.

### ಏ

ಏಱ್, ೭೨೦, ಗಾಯ.
ಏವೆನ್, ೬೩೫, ನಾನು ಯಾವಳು, ಏತಕ್ಕಾದೇನು.

### ಒ

ಒಗೆ, ೪೦೮, ಹುಟ್ಟು.
ಒಣರ್, ೬೨೭, ತಿಳಿ, ಎಣಿಸು, ಭಾವಿಸು.
ಒರೆ, ೫೮೧, ಹೇಳು, ತಿಳಿಸು.
ಒರ್ಮೆಯ್, ೩೯೪, ಒಬ್ಬ, ಅಸಹಾಯ, ಏಕಾಂಗವೀರ.
ಒಱಗು, ೨೮, ನಿದ್ರೆಮಾಡು.

ಒಱತೆ, ೪೮೮, ಚಿಲುಮೆ, ಊಟೆ, ಬುಗ್ಗೆ.
ಒಸಗೆ, ೫೪೪, ಶುಭ ವರ್ತಮಾನ.
ಒಸೆ, ೧೧೭, ಒಲಿ, ಪ್ರಸನ್ನವಾಗು.
ಒೞುಕ್ಕು, ೩೪, ಪ್ರವಾಹ.

ಕ

ಕಟ್ಟೊಲ್ಮೆ, ೫೩೭, ಅತಿ ಪ್ರೀತಿ.
ಕಡನ್, ೭೯೯, ಸಾಲ, ಋಣ, ಕರ್ತವ್ಯ.
ಕಡೆಗಣಿಸು, ೮೩೯, ತಿರಸ್ಕರಿಸು.
ಕಣಿ, ೫೯೦, ಕಾಲಜ್ಞಾನ.
ಕಣ್ಣಮಣಿ, ೪೫೭, ಪ್ರೀತಿಪಾತ್ರ, ಸುಖದಾಯಕ.
ಕನಲ್ಕೆ, ೬೦೯, ಕೋಪ.
ಕರೆ, ೩೫೨, ತೀರ.
ಕಱುಬು, ೧೩೪, ಅಸೂಯೆಪಡು,
೬೪೧, ಹುರುಡಿಗೆ ಪಾತ್ರ.
ಕಱೆ, ೫೨೨, ಕಳಂಕ, ಕೆಟ್ಟ ಹೆಸರು.
ಕಲಿ, ೧೬೧, ಶೂರ.
ಕಲ್ಕೆ, ೫೧೨, ಶಿಕ್ಷಣ.
ಕಲ್ಲಱೆ, ೯೭೯, ಗೋರಿ, ಸಮಾಧಿ.
ಕಲ್ಲಿಮ್, ೫೩೫, ಕಲಿಯೆವು.
ಕಲ್ವಂ, ೫೨೭, ಕಲಿಯೋಣ.
ಕಳ್, ೧೬೩, ಹೆಂಡ.
ಕಳ, ೨೧೬, ಕಣ, ಯುದ್ಧರಂಗ.
ಕೞಲ್ಚು, ೬೩೪, ಕಳಚು, ತಪ್ಪಿಸಿಕೊ.
ಕೞ್ತಲಿಸು, ೭೨, ಕಾಣದಂತೆ ಮಾಡು.
ಕೞಿ, ೬೭೩, ಸಾಯಿ.
ಕಾನ್, ೪೮೯, ಬೆಟ್ಟದ ತಪ್ಪಲಿನ ಕಾಡು.
ಕಿೞ್ನೆಲ, ೫೨೫, ನೆಲದ ಕೆಳಗು, ಅಧೋಲೋಕ (Hades.)
ಕೀೞಿನ್, ೩೯೯, ನೀಚ.
ಕೀೞ್ಗಳ್, ೮೩೧, ಕೆಳಗಿನವರು, ಸಾಮಾನ್ಯರು.
ಕುಡಿ, ೮೩೧, ಒಕ್ಕಲು, ಕುಳ, ವಂಶ.
ಕುತ್ತಂ, ೨೩೭, ರೋಗ.
ಕುದಿಕುದಿಗೊಳ್, ೪೯೮, ಬೇಯಿ, ಸಂಕಟಪಡು.
ಕುರುಳಿಡು, ೯೮೩, ಮುಡಿ ಕೊಡು.
ಕುಱುಪು, ೫೮೩, ಅಭಿಪ್ರಾಯ, ಉದ್ದೇಶ, ಗುರಿ.
ಕುಳಿರ್, ೫೩೦, ಚಳಿ.

ಕೂರ್, ೪೭೨, ಕ್ರೂರ.
ಕೂರ್ಪು, ೬೪೩, ಹರಿತ.
ಕೂರಿತ್ತು, ೨೨೮, ಹರಿತವಾದದ್ದು.
ಕೆಡೆ, ೨೬೪, ಬೀಳು.
ಕೆಡೆನುಡಿ, ೯೨೯, ತುಚ್ಛವಾಗಿ ಮಾತನಾಡು.
ಕೆಸಱು, ೧೩೪, ಕಳಂಕ.
ಕೆಳರ್, ೩೫, ಕೆರಳು, ಕೋಪಗೊಳ್ಳು.
ಕೆಳರಿಸು, ೬೧೬, ಕೆರಳಿಸು, ಉದ್ರೇಕಗೊಳಿಸು.
ಕೆೞವಿ, ೬೯೮, ಮುದುಕಿ.
ಕೊಡಗೆ, ೬೪೨, ಕೊಟ್ಟ ವಸ್ತು.
ಕೊತ್ತು, ೨೫೬, ಕೊಚ್ಚು.
ಕೊಱೆ, ೫೦, ಕತ್ತರಿಸು.
ಕೊಱೆ ಪಲ್, ೫೩೦, ಕೊರೆತವೇ ಹಲ್ಲಾದ.
ಕೊಳ್, ೨೬೩, ಮನಸ್ಸಿಗೆ ಹಿಡಿ, ಗ್ರಹಿಕೆಗೆ ಬರು.
ಕೋಡು, ೫೪೯, ಶಿಖರ.
ಕೋಯಿಲ್, ೫೫೦, ಗುಡಿ, ದೇವಾಲಯ.
ಕೋಲ್, ೧೩೫, ಬಾಣ; ೭೪೧, ದಂಡ, ಅಧಿಕಾರ.

ಗ

ಗಾಂಪು, ೭೧೦, ಬೆಪ್ಪು.
ಗಿಡಿ, ೬೫೬, ೮೬೭, ತುರುಕು.
ಗೆತ್ತು, ೫೧, ಭ್ರಮಿಸಿ.
ಗೆಲ್ಲಂ, ೧೪೬, ಜಯ.
ಗೆಲ್ಲವೆಣ್, ೬೦೩ ಜಯಲಕ್ಷ್ಮಿ.

ಚ

ಚಮ್ಮಟಿಗೆ, ೯೫, ಚಾವಟಿ.

ಜ

ಜೋಲ್, ೧೮೧, ಬಗ್ಗು, ಶಕ್ತಿಗುಂದು.

ತ

ತಗು, ೫೩೭, ೮೫೮, ಯೋಗ್ಯವಾಗು.
ತಣಿ, ೮೪, ತೃಪ್ತಿಹೊಂದು.
ತರುವಲಿ, ೫೨೦, ತಬ್ಬಲಿ.
ತಱುಸಲ್, ೧೫೭, ನಿಶ್ಚಯಿಸು, ಮನಸ್ಸುಮಾಡು.
ತಱುಸಲವು, ೪೭೩, ನಿರ್ಣಯ, ದೃಢಸಂಕಲ್ಪ.
ತಱುಬು, ೧೫೮, ದಬ್ಬು.

ತಲಿಮೆಜ಼್, ೫೧೧, ಎಲ್ಲರಿಗೂ ಮೇಲಾಗಿ ಮೆರೆ
ಯುವುದು.
ತವರಡವಿ, ೪೭೯, ಹುಟ್ಟಿದ ಅಡವಿ.
ತೞ್ಗು, ೯೯೯, ತಗ್ಗು.
ತೞ್ಪು, ೫೧, ತಬ್ಬು.
ತುಱು, ೪೫, ದನ, ಪಶು.
ತುಱುಕಾಱನ್, ೬೮೫, ದನ ಕಾಯುವವನು.
ತೆಂಕವೞಿ, ೭೯೧, ತೆಂಕಲ ದಾರಿ, ದಕ್ಷಿಣಾಪಥ.
ತೆಗೆ, ೩೦೪, ಹಿಮ್ಮೆಟ್ಟು.
ತೆರೆ ಮಸಗು, ೪೯, ಬಿರುಗಾಳಿಯ ಸಮುದ್ರದಂತೆ
ಉಕ್ಕು, ಹೆಚ್ಚಾಗು.
ತೊಱೆಯ, ೬೮೮, ಬೆಸ್ತ.
ತೊೞ್ತು, ೪೨೩, ತೊತ್ತು, ದಾಸಿ.

## ದ

ದೞಿಂ, ೨೧೯, ಸೈನ್ಯ.
ದಾೞಿ, ೩೮, ಯುದ್ಧಕ್ಕೆ ನಡೆಯುವುದು.

## ನ

ನಡಪು, ೪೧೪, ಸಲಹು.
ನಯಗಾಱನ್, ೮೧೪, ನಯದ ನಡತೆಯನ್ನರಿತ
ವನು, ಮರ್ಯಾದೆಯನ್ನು ಬಲ್ಲವನು.
ನಲ್ಲರ್, ೬೩೭, ಒಳ್ಳೆಯವರಾ.
ನವಿರ್, ೨೬೫, ಕೂದಲು.
ನಾಡಾಡಿ, ೮೧೭, ಸಾಮಾನ್ಯ, ಅಲ್ಪ.
ನಾಣ್, ೧೨೭, ನಾಚಿಕೆ, ಅವಮಾನ.
ನಿಱಿ, ೧೬೪, ಕ್ರಮ, ನ್ಯಾಯ.
ನೆಗೞ್, ೧೧೬, ನಡೆದುಕೊ, ಕೆಲಸ ಮಾಡು ;
೩೭೪, ಪ್ರಸಿದ್ಧನಾಗಿ ಬಾಳು.
ನೆರಂ, ೬೦೩, ಸಹಾಯ.
ನೇರ್ಪು, ೫೩೯, ಸರಿ.
ನೇಸಱ್, ೩೩, ಸೂರ್ಯ.
ನೋನ್, ೨, ವ್ರತವನ್ನು ಆಚರಿಸು.
ನೋಂಪಿ, ೨, ವ್ರತ, ದೀಕ್ಷೆ, ನೋಹಿ.

## ಪ

ಪಗಲ್, ೧೧೫, ದಿನ.
ಪಟ್ಟ, ೧೨, ಮಲಗಿದ್ದ.
ಪಟ್ಟಿ, ೯೮೯, ಹಟ್ಟಿ, ಮನೆ, ಹಳ್ಳಿ.
ಪಡಿ, ೯೪೩, ಸಮಾನ, ಬದಲು.
ಪಡೆ, ೧೨, ಸೈನ್ಯ.
ಪರ್ದು, ೮೨೪, ಹದ್ದು.
ಪೞಿ, ೨೩೫, ಹರಿ, ನಾಶವಾಗು.
ಪೞಿ, ೧೧೯, ನಿಂದೆ, ಅಪವಾದ.
ಪಾಂಗು, ೬೦೦, ರೀತಿ, ಸ್ವಭಾವ.
ಪಾರ್, ೩೩೭, ನಿರೀಕ್ಷಿಸು ; ೫೬೧, ನೋಡು.
ಪಾರ್ವರ್, ೮೪೯, ಬ್ರಾಹ್ಮಣರು, ಹಾರುವರು.
ಪಿರ್ಗು, ೭೫೫, ಹಿಗ್ಗು.
ಪುರ್ಚು, ೫೮, ಹುಚ್ಚು.
ಪುರುಳ್, ೪೧೯, ತಿರುಳುಳ್ಳವನು, ಜ್ಞಾನಿ.
ಪುಟಿಲ್, ೬೯೬, ಮರದ ತೋಪು.
ಪೆಂಪು, ೭೨೪, ಮಹಿಮೆ.
ಪೆರ್ಮ, ೨೦, ದೊಡ್ಡವನು, ಸ್ವಾಮಿ, ದೇವರು.
ಪೆರ್ಕುಡಿ, ೮೩೧, ದೊಡ್ಡ ವಂಶ.
ಪೆಱ್, ೪೯೧, ಚಂದ್ರ.
ಪೊಂಕಂ, ೪೯೯, ಉಬ್ಬು, ಉತ್ಸಾಹ.
ಪೊಗಸು, ೭೨೯, ಹಗಲು, ಹೊತ್ತಾರೆ.
ಪೊಡೆ, ೪೦೪, ಹೊಟ್ಟೆ, ಒಳಗು.
ಪೊನಲ್, ೩೫೩, ಹೊಳೆ.
ಪೊಂದು, ೭೮೪, ಸಾಯಿ, ನಾಶವಾಗು.
ಪೊಯ್ವೆತ್ತ, ೨೫೨, ಏಟು ತಿಂದ.
ಪೊಲ್ಲ, ೧೫೪, ಕೆಟ್ಟ.
ಪೊಲೆ, ೩೦೨, ಹೊಲೆ, ಕೆಡುಕು.
ಪೊಸೆ, ೪೭, ಉಜ್ಜು.
ಪೊೞ್ತು, ೬೬೭, ಸೂರ್ಯ.
ಪೊೞಿವೆಂಡಿರ್, ೬೯೦, ನದಿಗಳ ಅಧಿದೇವತೆಗಳು.
ಪೋಕೆ, ೯೪೧, ಹೋಗಲಿ.

## ಬ

ಬಣಬೆ, ೨೬೪, ರಾಶಿ.
ಬಲ್ವಣ, ೫೩, ದೊಡ್ಡ ಹೆಣ.
ಬಸವೞಿ, ೨೭೭, ಜ್ಞಾನತಪ್ಪು, ಪರವಶನಾಗು.
ಬಳವಿ, ೧೮೫, ಏಳಿಗೆ, ಅಭ್ಯುದಯ.
ಬಳೆಯಿಸು, ೯೭೭, ಬೆಳೆಯಿಸು.
ಬೞಿಯಟ್ಟು, ೨೫೧, ಆಳನ್ನು ಓಡಿಸು.
ಬೞಿವಿಡು, ೫೩೧, ದಾರಿ ಬಿಡು.

ಬಾನವರ್, ೩೩೮, ದೇವತೆಗಳು.
(ಬಾನ್=ಆಕಾಶ).
ಬಾಳ್, ೪೬, ಕತ್ತಿ.
ಬಿರ್ಚು, ೪೬, ತುಂಡುಮಾಡು.
ಬಿಡುತೆ, ೬೧೭, ಬಿಡುಗಡೆ.
ಬಿರ್ದಿನನ್, ೫೬, ಅತಿಥಿ.
ಬಿರ್ದು, ೬೬೬, ೮೨೬, ಔತಣ.
ಬಿರ್ದುಬರ್=ಅತಿಥಿಯಾಗಿ ಬರು.
ಬಿಱುಗಾಣ್ಕೆ, ೭೯೦, ಕ್ರೂರವಾದ ದೃಶ್ಯ.
ಬಿಲ್ವೆಸನ್, ೮೩೪, ಬಿಲ್ಲಿನ ಕೆಲಸ, ಚಾತುರ್ಯ.
ಬೀಡು, ೩, ಗೂಡಾರ, ಪಾಳೆಯ.
ಬೀಣೆ, ೮೩೪, ವೀಣೆ.
ಬೆದಕು, ೧೬, ಹುಡುಕು, ವಿಚಾರಮಾಡು.
ಬೆಸನ್, ೪೪೫, (ಹೇಳಿದ) ಕೆಲಸ.
ಬೆಳ್ಪನ, ೭೧೦, ಬೆಪ್ಪು.
ಬೆಳುವ, ೧೩೧, ಒಂದು ಬಗೆಯ ಪಾರಿವಾಳ,
ಸೋರೆಹಕ್ಕಿ.

ಮ

ಮಗುಳ್, ೨೬೨, ಹಿಂದಿರುಗು.
ಮಗುೞ್, ೬೩೯, ಸಂತೋಷಿಸು.
ಮರುಳ್, ೪೨, ೨೧೩, ೪೯೬, ಪಿಶಾಚಿ, ಭೂತ;
೨೭೭, ಹುಚ್ಚಾಗು; ೪೧೯, ಹುಚ್ಚ.
ಮರ್ಬು, ೬೬೬, ಕತ್ತಲೆ.
ಮಾಣ್, ೯೯೯, ಬಿಡು.
ಮಿನುಕು, ೪೭೦, ಗೊಣಗು, ಮೆತ್ತಗೆ ಜಪಿಸು.
ಮುಕ್ಕನ್, ೪೦೧, ಮೂರ್ಖ, ಅಯೋಗ್ಯ.
ಮುಡಿ, ೫೨, ೩೯೫, ಕಿರೀಟ.
ಮುಂದುಗಾಣ್ಕೆ, ೪೪೪, ಭವಿಷ್ಯದ್ಜ್ಞಾನ,
ದೂರದೃಷ್ಟಿ.
ಮುನ್ನೀರ್, ೧೬೭, ಸಮುದ್ರ.
ಮುಯ್ಯ್, ೨೬೦, ಹಗೆ ತೀರಿಸುವುದು,
ಪ್ರತೀಕಾರ, ಮುಯ್ಯಿಗೆ ಮುಯ್ಯಿ.
ಮುಸುಱ್, ೫೭೭, ಮುತ್ತಿಕೊ.
ಮೂಗುಸಿರ್ಗಳ್, ೧೫೮, ಮೂಗ ಜಂತುಗಳು.
ಮೆಯ್ಯಿಡು, ೯೮೩, ನಮಸ್ಕರಿಸು.
ಮೊನೆ, ೩೩೩, ಯುದ್ಧ, ವ್ಯೂಹಮುಖ.
ಮೊರೆ, ೯೪೫, ಕೂಗು, ಹಾರಾಡು.
ಮೊಱೆ, ೪೩೨, ನಂಟು, ದಿಕ್ಕು.
ಮೊೞಂಗು, ೩೫೨, ಧ್ವನಿ, ಗುಡುಗು.
ಮೊೞ್ಗು, ೫೩೦, ಬಗ್ಗು, ವಶವಾಗು.

ಸ

ಸಮಱ್, ೪೮೦, ಸಂತಯಿಸು, ನೆಟ್ಟಗೆ ಮಾಡು.
ಸಮೆ, ೮೦೭, ಮಾಡು.
ಸಯ್ತು, ೨೨೫, ನಿಂತು, ಅಳಿದು ಹೋಗಿ.
ಸಯ್ಪು, ೭೯, ಒಳ್ಳೆಯದು, ಪುಣ್ಯ.
ಸಾಲ್ದನ್, ೧೮೨, ಸಾಕಾದವನು, ಎದುರಿಸಬಲ್ಲ
ಶೂರ.
ಸಿಡಿ, ೭೯೫, ಕೋಪಿಸಿಕೊ.
ಸುರಿಗೆ, ೮೦೪, ಸಣ್ಣ ಕತ್ತಿ, ಕಠಾರಿ.
ಸೂಲ್ ಮುಲುಕು, ೪೨೬, ಹೆರಿಗೆಯ ಬೇನೆ.
ಸೇವಿಸು, ೮೦, ಸೇವೆಗಾಗಿ ಸಲ್ಲಿಸು.
ಸೋರೆ, ೫೦೫, ಬೆಳುವನ ಹಕ್ಕಿ.
ಸೋವು, ೬೮೦, ಬೇಟೆ ಹುಡುಕಿಕೊಂಡು
ಹೋಗುವುದು.

---

2282-32 ಬೆಂಗಳೂರು ಪ್ರೆಸ್, ಮೈಸೂರು ರೋಡ್, ಬೆಂಗಳೂರು ಸಿಟಿ